# 'ಸಿದ್ಧಗಂಗಾ' ಚಿರಾಯುವಾಗಲೆಂದು

## ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು.

542 ಶ್ರೀ ಟಿ. ಜಿ. ಸಿದ್ಧರಾಮಯ್ಯ,
ಶಿಕ್ಷಕರು,
ತ್ಯಾಗಟೂರು, ಗುಬ್ಬಿ ತಾ॥
ತುಮಕೂರು ಜಿಲ್ಲೆ.

543 ಶ್ರೀ ಎಂ. ಎಸ್. ಗುರುಚನ್ನಬಸವಯ್ಯ
ಶಿಕ್ಷಕರು,
ಬೆಣಚಿಗೆರೆ, ಗುಬ್ಬಿ ತಾ॥

544 ಶ್ರೀ ಟಿ. ಜಿ. ಗುರುಸಿದ್ಧಯ್ಯ ಶಿಕ್ಷಕರು,
ತ್ಯಾಗಟೂರು, ಗುಬ್ಬಿ ತಾ॥

545 ಶ್ರೀ ಮೂಡಲಯ್ಯ, ಶಿಕ್ಷಕರು
ತ್ಯಾಗಟೂರು, ಗುಬ್ಬಿ ತಾ॥

546 ಶ್ರೀ ಟಿ. ಎಂ. ಸಿದ್ಧಲಿಂಗಪ್ಪ ಶಿಕ್ಷಕರು,
ತ್ಯಾಗಟೂರು, ಗುಬ್ಬಿ ತಾ॥

547 ಶ್ರೀ ಆರ್. ಎಸ್. ಗಂಗಣ್ಣ ಶಿಕ್ಷಕರು,
ಉದ್ದೆಹೊಸಕೆರೆ, ಗುಬ್ಬಿ ತಾ॥

548. ಶ್ರೀ ಎಂ. ಆರ್. ಶಿವಣ್ಣ, ಶಿಕ್ಷಕರು
ಎನ್. ರಾಂಪುರ ಗುಬ್ಬಿ ತಾ॥

549 ಶ್ರೀ ಎಂ. ಶಿವನಂಜಯ್ಯ, ಶಿಕ್ಷಕರು
ಎನ್. ಮತಿಘಟ್ಟ, ಗುಬ್ಬಿ ತಾ॥

550 ಶ್ರೀ ಮಹಾಲಿಂಗಯ್ಯ, ಶಿಕ್ಷಕರು
ತ್ಯಾಗಟೂರು, ಗುಬ್ಬಿ ತಾ॥

551 ಶ್ರೀ ಬಿ. ಗಂಗಾಧರಯ್ಯ, ಶಿಕ್ಷಕರು
ಎನ್. ಮತ್ತಿಘಟ್ಟ, ಗುಬ್ಬಿ ತಾ॥

552 ಶ್ರೀ ಹೆಚ್. ಆರ್. ನಂಜುಂಡಯ್ಯ
ಶಿಕ್ಷಕರು,
ಹೆಚ್. ನಾಗೇನಹಳ್ಳಿ, ಗುಬ್ಬಿ ತಾ॥

553 ಶ್ರೀ ಎಸ್. ಹೆಚ್. ಮಹದೇವಯ್ಯ
ಶಿಕ್ಷಕರು,
ಅದಲಗೆರೆ, ಗುಬ್ಬಿ ತಾ॥

554 ಶ್ರೀ ಸಿ. ಬಸವಯ್ಯ, ಶಿಕ್ಷಕರು
ಅಮ್ಮನಘಟ್ಟ, ಗುಬ್ಬಿ ತಾ॥

555 ಶ್ರೀ ಜಿ ಎಸ್ ಮಹದೇವಯ್ಯ
(ಬಳ್ಳಿಕಟ್ಟೆ) s/o ಶ್ರೀ ಸಿದ್ಧರಾಮಯ್ಯ
ಗೋಡೆಕೆರೆ, ಚಿಕ್ಕನಾಯಕನ ಹಳ್ಳಿ
ತುಮಕೂರು ಜಿಲ್ಲೆ.

556 ಶ್ರೀ ಪುಟ್ಟಣ್ಣಯ್ಯ
ಎನ್. ಮತ್ತಿಘಟ್ಟ, ಗುಬ್ಬಿ ತಾ॥
ತುಮಕೂರು ಜಿಲ್ಲೆ.

557 ಶ್ರೀ ಶಿವಣ್ಣ, ಶಿಕ್ಷಕರು
c/o ಶ್ರೀ ಹುಚ್ಚಯ್ಯ
ಕಿಟ್ಟದಕುಪ್ಪೆ, ಗುಬ್ಬಿ ತಾ॥
ತುಮಕೂರು ಜಿಲ್ಲೆ.

558 ಶ್ರೀ ಎಂ. ಬಿ. ಗುರುಸಿದ್ಧಯ್ಯ, ಶಿಕ್ಷಕರು
ಆನೆಪೇಟೆ, ಗುಬ್ಬಿ, ತುಮಕೂರು ಜಿಲ್ಲೆ.

559 ಶ್ರೀ ಆರ್. ವೆಂಕಟೇಶ್, ಶಿಕ್ಷಕರು
ಅಮ್ಮನಘಟ್ಟ, ಗುಬ್ಬಿ ತಾ॥

560 ಶ್ರೀ ಆರ್. ಶಿವಶಂಕರಯ್ಯ ಶಿಕ್ಷಕರು,
ಚನ್ನಸೆಟ್ಟಿಹಳ್ಳಿ, ಗುಬ್ಬಿ ತಾ॥
ತುಮಕೂರು ಜಿಲ್ಲೆ.

(ಮುಂದುವರಿಯುತ್ತದೆ.)



# ಶ್ರೀವಾಣಿ

ಸಾಮಾನ್ಯವಾಗಿ ಜಗತ್ತಿನಲ್ಲಿ ಇಂದು ಅನುಭವಿಸುತ್ತಿರುವ ಕಷ್ಟಸಮುದಾಯಕೆ ಅಹಂಕಾರವು ಮೂಲಹೇತುವಾಗಿರುವುದು. ಕಾಮನೆಗಳೆಲ್ಲವೂ ಅಹಂಕಾರ ಪುರುಷನಿಗೆ ಸಾರ್ವಭೌಮಪಟ್ಟವನ್ನು ಕಟ್ಟಿ, ಅವನ ಸಾನ್ನಿಧ್ಯದಲ್ಲಿ ತಾವು ಕುಣಿದಾಡಿ ನಲಿಯುತ್ತಿರುವುವು. ನಾನು ಮಾಡುವೆನು, ನಾನು ದೊಡ್ಡವನು, ನಾನು ಕರ್ತೃ, ನಾನು ಭೋಕ್ತೃ ಮುಂತಾದ ಭಾವನೆಗಳು ಉದಯವಾಗುವುದೇ ಸರ್ವ ಅನರ್ಥಗಳಿಗೂ ಮೂಲ. ಇಂದು ಪ್ರಪಂಚದಲ್ಲಿ ನಡೆಯುತ್ತಿರುವ ಅಸಂಖ್ಯಾತವ್ಯವಹಾರಗಳು, ಅನೇಕ ಗಲಭೆಗಳು ರಾಜಕೀಯ ಆಂದೋಲನಗಳು, ವಿನಾಶಕಾರಕ ಕೃತ್ಯಗಳು ಇವೆಲ್ಲಕ್ಕೂ ಅಹಂಕಾರ-ಮಮಕಾರಗಳೇ, ಅರ್ಥಾತ್ ನಾನು-ನನ್ನದೆಂಬುದೇಮೂಲ. ಈ ಮದವೊಂದನ್ನು ಬಿಟ್ಟರೆ ಆತನೇ ಸುಖಜೀವಿಯು. ಶಾಂತಿಪ್ರಸ್ಥಾಪಕನು. ಮನುಷ್ಯನಲ್ಲಿ ಅಹಂಕಾರಗಳಿರುವವರೆಗೂ ಶಾಂತಿ ಸಮಾಧಾನಗಳು ನೆಲೆಗೊಳ್ಳಲಾರವು. ಒಂದು ವೇಳೆ ಅಹಂಕಾರ ಮಮಕಾರಗಳ ಪೂರ್ವಕ ಸುಖಗಳು ದೊರೆತಿದ್ದರೆ, ಅವೆಲ್ಲವೂ ದುಃಖಮಿಶ್ರಿತವಾದುವು. ದುಃಖ ರಹಿತವಾದ ಸುಖವೆನ್ನುವುದು ದುರ್ಲಭವಾದಮಾತು. ಅದು ಅಹಂಕಾರ ಮಮಕಾರಶೂನ್ಯವಾದ ಆತ್ಮ ಸಾಕ್ಷಾತ್ಕಾರದಿಂದ ದೊರಕುವುದೇ ಹೊರತು ಅಪಾರವಾದ ಧನಸಂಗ್ರಹದಿಂದಾಗಲೀ ಅಲ್ಲ. ಈ ವಿಧವಾದ ನಿತ್ಯವೂ, ಸತ್ಯವೂ, ನಿರ್ದೋಷವೂ, ಅನಾದಿಯಾದ ಸುಖವೇ ಮೋಕ್ಷವೆನ್ನುವುದು ಅದರ ಲಾಭಕ್ಕಾಗಿ ಕೈಲಾಸಕ್ಕೆ. ಹೋಗಬೇಕಾಗಿಲ್ಲ. ಕೈಲಾಸವೆಂಬುದು ಒಂದು ನಿರ್ದಿಷ್ಟಸ್ಥಾನವಲ್ಲ. ಮೇಲೆ ಹೇಳಿದಂತಹ ಆನಂದವು ಮನುಷ್ಯನಿಗೆ ಉಂಟಾದಾಗ ಅದೇ ಕೈಲಾಸವು. ಆದಕ್ಕಾಗಿ ಬೇರೊಂದೆಡೆಗೆ ಹೋಗಿ ಹುಡುಕಬೇಕೆನ್ನುವುದು ತಪ್ಪುಭಾವನೆಯು. ಇದನ್ನು ಮನುಷ್ಯನು ನಿರಂಹಕಾರಿಯಾಗಿ ನಿಷ್ಕಾಮ ಕಾಯಕದಿಂದ ಪಡೆಯಬಹುದು. ಕಾಮನಾಶಹಿತ ಮನೋವೃತ್ತಿಯಿಂದ ಅಹಂಕಾರರಹಿತನಾಗಿ, ಈಶಾರ್ಪಣಬುದ್ಧಿಯಿಂದ ಮಾಡುವ ಸತ್ಕ್ರಿಯಾಚರಣೆಯೇ ಈ ಕಾಯಕಕ್ಕೆ ವಾಖ್ಯೆ. "I mean by work aetion done for the divine and more and more in person with the divine alone and nothing else" ಎಂಬ ಅರವಿಂದವಾಣಿಯೂ ಇದನ್ನೆ ಸಾರುತ್ತದೆ.

# ‘ಸಿದ್ಧಗಂಗಾ’

ಜನವರಿ, ೧೯೭೯

ಸಂಪುಟ-೧೫ ಸಂಚಿಕೆ-೧



ಪ್ರಕಾಶಕರು

ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಸಂಘದ ಪರವಾಗಿ

ಸಂಪಾದಕ ಮಂಡಲಿ

ಪಂ|| ಚನ್ನಪ್ಪ ಎರೇಸೀಮೆ
ಪಿ. ಎನ್. ಚಂದ್ರಶೇಖರಯ್ಯ
ವಿರೂಪಾಕ್ಷಯ್ಯ
ಬಸವರಾಜು

ಜಾಹಿರಾತು ವ್ಯವಸ್ಥಾಪಕರು

ಎಂ. ರೇಣುಕಾರಾಧ್ಯ

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ


ಚಂದಾ ವಿವರ

ಆಜೀವ ಸದಸ್ಯತ್ವ: **151-00** ರೂ
ವಾರ್ಷಿಕ ಚಂದಾ: **10-00** ರೂ

## ಈ ಸಂಚಿಕೆಯಲ್ಲಿ



ಮುಖಪುಟ

ಶ್ರೀ ಸಿದ್ಧಲಿಂಗೇಶ್ವರ ಗಿರಿ ಮಧ್ಯ ಮಂದಿರ
ಶಿಖರದ ಸುಂದರ ಸಿರಿನೋಟ.

### ಲೇಖಕರಲ್ಲಿ ಮನವಿ

‘ಸಿದ್ಧಗಂಗಾ’ ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣ ಕಥೆ, ಕವನ, ನಗೇಹನಿ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು, ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ ‘ಸಿದ್ಧಗಂಗಾ’ ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

“ಸಂಪಾದಕರು”
“ಸಿದ್ಧಗಂಗಾ” [ಕನ್ನಡ ಮಾಸ ಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ-572131 ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ವಿನಂತಿ

1979ನೆಯ ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ ‘ಸಿದ್ಧಗಂಗಾ’ ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು

‘ಸಿದ್ಧಗಂಗಾ’ ಮಾಸ ಪತ್ರಿಕೆ, ಸಿದ್ಧಗಂಗಾ ಮಠ-572131 ತುಮಕೂರು ಜಿಲ್ಲೆ.

# ನವನೀತ

( ಸಂಸ್ಕೃತ ಶ್ಲೋಕಗಳ ಭಾವಾನುವಾದ )

ಅಪ್ರಾರ್ಥಿತಾನಿ ದುಃಖಾನಿ ಯಥೈವಾಯಾಂತಿ ದೇಹಿನಾಂ ।
ಸುಖಾನ್ಯಪಿ ತಥಾಮನ್ಯೇ ದೈನ್ಯಮತ್ರಾತಿರಿಚ್ಯತೇ ॥

ಬಯಸದೆ ಇದ್ದರೂ ದುಃಖಗಳು ಹೇಗೆ
ಮನುಷ್ಯರಿಗೆ ಬಂದುಸೇರುತ್ತವೋ ಸುಖಗಳೂ
ಹಾಗೆಯೇ ಎಂದು ನಾನು ತಿಳಿಯುತ್ತೇನೆ. ದುಃಖ
ದಲ್ಲಿ ದೈನ್ಯ ಒಂದು ಅಧಿಕ ವಾಗಿರುತ್ತದೆ.

★ ⁑ ★

ಜಗತಿ ನರಜನ್ಮ ತಸ್ಮಿನ್ ವೈದುಷ್ಯಂ ತತ್ರ ಸತ್ಕವಿತಾ ।
ಕವಿತಾಯಾಂ ಪರಿಣಾಮೋ ದುಷ್ಪ್ರಾಪಃ ಪುಣ್ಯಹೀನೇನ ॥

ಜಗತ್ತಿನಲ್ಲಿ ಮನುಷ್ಯ ಜನ್ಮ ದುರ್ಲಭವಾದುದು.
ಅದರಲ್ಲಿಯೂ ಪಾಂಡಿತ್ಯ, ಅದಕ್ಕೂ ಮಿಗಿಲಾಗಿ ಉತ್ತಮ
ಕವಿತಾ ಶಕ್ತಿ, ಕವಿತೆಯಲ್ಲಿಯೂ ಪರಿಣತಿ ಬರುವುದು
ದುರ್ಲಭ ಇವು ಪುಣ್ಯಹೀನನಿಗೆ ದೊರೆಯುದಿಲ್ಲ.

★ ⁑ ★

ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚ ಮಿಂದ್ರಿಯನಿಗ್ರಹಃ ।
ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಮ್ ॥

ತೃಪ್ತಿ, ತಾಳ್ಮೆ, ಸಿಟ್ಟು ಮೊದಲಾದುವನ್ನು ನಿಗ್ರಹಿಸುವುದು,
ಅನ್ಯಾಯದಿಂದ ಇತರರ ದ್ರವ್ಯವನ್ನು ತೆಗೆದುಕೊಳ್ಳದೇ ಇರುವುದು,
ಶುಚಿಯಾಗಿರುವುದು, ಇಂದ್ರಿಯಗಳ ನಿಗ್ರಹ, ಶಾಸ್ತ್ರ ಜ್ಞಾನ,
ಸತ್ಯ, ಶಾಂತಿ ಇವು ಹತ್ತು ಧರ್ಮದ ಲಕ್ಷಣ ವೆನಿಸುವುದು.

★ ⁑ ★

— ಕಾವ್ಯ ಸುಧಾಪ್ರಿಯ

# ಅಮೃತ ಬಿಂದು

“ನತು ಪ್ರತಿ ನಿವಿಷ್ಟ ಮೂರ್ಖ ಜನ ಚಿತ್ತಮಾರಾಧಯೇತ್” ತಾನು ತಿಳಿದದ್ದೇ ಸರಿಯೆಂದು ವಾದಿಸುವ ಮೂರ್ಖನ ಮನಸ್ಸು ಪರಿವರ್ತಿಸಲು ಅಸಾಧ್ಯ ಎಂದಿದ್ದಾರೆ ಸುಭಾಷಿತಕಾರರು. ಇದು ವಿಚಾರಾರ್ಹವೇ. ವ್ಯಕ್ತಿ ಸಮಾಜ ಜೀವಿ. ಅವನಿಗೆ ಸಮಾಜದ ಎಲ್ಲಮುಖಗಳ ಪರಿಚಯ ಅಗತ್ಯ. ನಾನಾಸಂಘ ಸಮಾಜ ಮತ್ತು ಅಭಿಪ್ರಾಯವುಳ್ಳ ವ್ಯಕ್ತಿಗಳ ಸಹಾಯ ಸಂಪರ್ಕಗಳನ್ನೂ ಹೊಂದಿರ ಬೇಕಾಗುತ್ತದೆ. ಅವರೊಡನೆ ವಿಚಾರ ವಿನಿಮಯ ಮಾಡಿಕೊಳ್ಳ ಬೇಕಾಗುತ್ತದೆ. ಸಮಾಜದ ಸ್ಥಿತಿಗಳಿಗೆ ತನ್ನನ್ನೂ ಅಣಿಮಾಡಿಕೊಳ್ಳ ಬೇಕು ಪರಂಪರೆಯ ಅರಿವಿನಿಂದ ಸನಾತನ ಧರ್ಮವನ್ನು ಮೈಗೂಡಿಸಿ ಕೊಂಡು ವ್ಯವಹರಿಸುವ ಪರಿಪಾಠವನ್ನು ಕಲಿಯಬೇಕು. ಇದನ್ನು ಕಂಡೇ ನಮ್ಮ ಪೂರ್ವಿಕರು ‘ಹೊತ್ತು ಹೋದಂತೆಕೊಡೆ ಹಿಡಿಯಬೇಕು’ ಎಂದರು. ವಿದ್ಯಾವಂತ ಪರಾಕ್ರಮಿ, ಸಾರ್ವಭೌಮನಾಗಿ ಆಳಿದ ದುರ್ಯೋಧನನ ಅವಸಾನವನ್ನು ನೆನಸಿಕೊಂಡಾಗ ಮತ್ತೆ ಹೆಚ್ಚಿಗೆ ಹೇಳಬೇಕಾಗಿಲ್ಲ. ಜಾನಾಮಿಧರ್ಮಂ ನಚಮೇ ಪ್ರವೃತ್ತಿಃ। ಜಾನಾಮ್ಯಧರ್ಮಂ ನಚಮೇ ನಿವೃತ್ತಿಃ। ಧರ್ಮವನ್ನು ತಿಳಿದಿದ್ದೇನೆ ಆಚರಿಸುವುದಿಲ್ಲ, ಅಧರ್ಮವನ್ನೂ ಬಲ್ಲೆ ಆಚರಿಸದೇ ಬಿಡುವುದಿಲ್ಲ. ಎಂದವನ ಬುದ್ಧಿ ತುಂಬಿದ ಸಭೆಯಲ್ಲಿ ದ್ರೌಪದಿಯನ್ನು ಸಾಮನ್ಯನಂತೆ ಅವಮಾನ ಮಾಡಲು ಹಿಂಜರಿಯಲಿಲ್ಲ. ಆದ್ದರಿಂದ ವಿವೇಕದಿಂದ ವರ್ತಿಸುವುದು ಜಾಣತನ ಅವಿವೇಕದಿಂದ ವರ್ತಿಸುವುದೇ ಮೂರ್ಖತನಕ್ಕೆ ನಾಂದಿ.

-ದುಂಬಿ’

# ಗೀತೋಪದೇಶ

—ಲೇಖಕ : ಆಚಾರ್ಯ ಕಾಕಾ ಕಾಲೇಲಕರ
ಅನುವಾದಕ :— ಮು. ಗ. ಶೆಟ್ಟಿ,

ಗೀತೆಯಲ್ಲಿ "ಮಾಸಾನಾಂ ಮಾರ್ಗಶೀರ್ಷೋಹಮ್" ಎಂದು ಹೇಳಿರುವುದರಿಂದ ಗೀತೆಯನ್ನು ಹೇಳಿದ ಕಾಲವೂ ಮಾರ್ಗಶೀರ್ಷಮಾಸವೆಂದು ನಿಶ್ಚಯಿಸಲಾಗಿದೆ.

ಗೀತೆಯೊಂದು ಗ್ರಂಥವಲ್ಲ; ಅದು ಮಾನವಮಾತೆ; ಅದರ ಸಂದೇಶ ಭಾರತದ ಮೂಲಕ ಇಡೀ ಮಾನವಜಾತಿಗೆ ಕೊಟ್ಟ ಸಂದೇಶವಾಗಿದೆ.

ಕುರುಕ್ಷೇತ್ರದ ರಣಭೂಮಿಯ ಮೇಲೆ ಕೌರವ ಪಾಂಡವರ ಎರಡೂ ಸೈನ್ಯ ಎದುರು ಬದುರಾಗಿ ಯುದ್ಧಕ್ಕೆ ಸನ್ನದ್ಧವಾಗಿ ನಿಂತಿದೆ. ಯುಧಿಷ್ಠರನು ಎರಡೂ ಸೇನೆಗಳ ಮಧ್ಯದಲ್ಲಿ ನಿಂತು ಬೇಕಾದವರು ಬೇಕಾದ ಪಕ್ಷವನ್ನು ಸೇರಲು ಇನ್ನೂ ಅವಕಾಶವಿದೆಯೆಂದು ಘೋಷಿಸುವನು. ಬಳಿಕ ಎರಡೂ ಸೈನ್ಯಗಳ ಸೇನಾಪತಿ ಮತ್ತು ವೀರರು ತಮ್ಮ ತಮ್ಮ ಶಂಖವನ್ನು ಊದುತ್ತಾರೆ, ಯುದ್ಧ ಪ್ರಾರಂಭವಾಗುವ ಕಾಲ ಸನ್ನಿಹಿತವಾಗುತ್ತದೆ ಆ ಸಮಯದಲ್ಲಿ ಅರ್ಜುನನ ಮನಸ್ಸಿನಲ್ಲಿ ಕುದಿಯುತ್ತಿದ್ದ ಸ್ವಜನಮೋಹ ಮೇಲಕ್ಕೆದ್ದು ಬರುತ್ತದೆ. ಮತ್ತು ಆಯತ ಹೊತ್ತಿನಲ್ಲಿ "ಆಪ್ತಜನರ ಸಂಹಾರಮಾಡುವುದು ಮತ್ತು ಸಂಹಾರ ಮಾಡಲು ಬಿಡುವುದು–ಇವಕ್ಕಿಂತ ರಾಜ್ಯದ ಅಪೇಕ್ಷೆಯನ್ನು ಬಿಟ್ಟು, ಶಸ್ತ್ರವನ್ನು ಕೆಳಗಿಡುವುದು ಮೇಲು" ಎಂದು ರಥದಿಂದ ಕೆಳಗೆ ಇಳಿಯುತ್ತಾನೆ.

ಭಗವಾನ್ ಶ್ರೀ ಕೃಷ್ಣ, ಅರ್ಜುನನ ಮಿತ್ರ, ಪಾಂಡವರ ಕೈವಾರಿ, ದ್ರೌಪದಿಯ ಬಂಧು. ಭೀಷ್ಮನ ಆರಾಧ್ಯ ದೈವತ–ಸ್ವತಃ ನಿಶ್ಶಸ್ತ್ರನಾಗಿದ್ದು ಅರ್ಜುನನ ಸಾರಥ್ಯವನ್ನು ಮಾಡುತ್ತಿದ್ದಾನೆ. ಅರ್ಜುನನ ಈ ಆತ್ಯಂತಿಕ ದಯಾಭಾವನೆಯ ವ್ಯಾಕುಲತೆಯನ್ನು ಕಂಡು ಚಕಿತನಾಗುತ್ತಾನೆ. ಮತ್ತು ಈ ಯುದ್ಧವನ್ನು ಮಾಡುವುದೇ ಬೇಡ ಎಂದು ತತ್ವಜ್ಞಾನದ ಮಾತನ್ನಾಡುವ ಅರ್ಜುನನಿಗೆ ಮಾಡಿದ ತಾತ್ವಿಕ–ಮತ್ತು ವ್ಯವಹಾರಿಕ ಬೋಧವೇ ಗೀತೆ. ಇದಕ್ಕೆ ಭಗವದ್ಗೀತೆಯೆಂದು ಹೇಳುತ್ತಾರೆ. ಶ್ರೀ ಕೃಷ್ಣಾರ್ಜುನರ ಈ ಸಂವಾದ ಮಹಾ ಭಾರತದ ಹದಿನೆಂಟನೆಯ ಅಧ್ಯಾಯದಲ್ಲಿ ಬಣ್ಣಿಸಿದೆ. ಮತ್ತು ಅದರಲ್ಲಿ 700 ಶ್ಲೋಕ-ಗಳಿವೆ. ಹಿಂದೂಧರ್ಮದಲ್ಲಿಯ ಎಲ್ಲ ತತ್ವಗಳೂ ಗೀತೆಯಲ್ಲಿ ಯಥಾಯೋಗ್ಯವಾಗಿ ಬಂದಿವೆ. ಜಗತ್ತಿನಲ್ಲಿ ಮನುಷ್ಯ ಹೇಗೆ ವರ್ತಿಸಬೇಕು ಎಂಬ ಕಲ್ಪನೆ ಉತ್ತಮ ರೀತಿಯಲ್ಲಿ ಬರುತ್ತಿದೆ.

ಭಗವದ್ಗೀತೆಯನ್ನು ಹಿಂದೂ ಧರ್ಮದ ಮಹಾನ್-ಧರ್ಮ ಗ್ರಂಥವೆಂದು ತಿಳಿಯಲಾಗುತ್ತದೆ. ಎಲ್ಲ ಪಂಥದ ಜನರೂ ಭಗವದ್ಗೀತೆಯನ್ನು ಆದರದಿಂದ ನೋಡುತ್ತಾರೆ. ಈ ಗ್ರಂಥದ ಭಾಷಾಂತರವು ಜಗತ್ತಿನ ಎಲ್ಲ ಭಾಷೆಗಳಲ್ಲಿಯೂ ಆಗಿದೆ.

ಕೃಷ್ಣಾರ್ಜುನ ಸಂವಾದದಲ್ಲಿ ಇಂಥ ರಹಸ್ಯ ಏನು ಹೇಳಿದೆ ? ಮನುಷ್ಯನ ಕರ್ತವ್ಯ ಏನು ? ಧರ್ಮಸಂಕಟ ಕಾಲದಲ್ಲಿ ಮನುಷ್ಯನು ಯಾವ ಮಾರ್ಗವನ್ನು ಸ್ವೀಕರಿಸಬೇಕು ? ಮನುಷ್ಯನು ಕರ್ಮಮಾಡುತ್ತಿರುವಾಗಲೂ ಅದರಿಂದ ಅಲಿಪ್ತನಾಗಿ ಉಳಿಯುವುದಾದರೆ ಏನು ಮಾಡಬೇಕು, ಎಂಬುದರ ವಿವೇಚನೆ ಈ ಗ್ರಂಥದಲ್ಲಿ ಇದೆ. ವ್ಯಕ್ತಿಯ ಮತ್ತು ಸಮಾಜದ ಜೀವನ ರಹಸ್ಯವನ್ನು ಆಧ್ಯಾತ್ಮಿಕ–ದೃಷ್ಟಿಯಿಂದ ಇದರಲ್ಲಿ ಚರ್ಚಿಸಿದೆ. ಜ್ಞಾನ, ಕರ್ಮ ಭಕ್ತಿ, ಸಾಂಖ್ಯಯೋಗ ಮುಂತಾದ ಸರ್ವಮಾರ್ಗಗಳ ಮೂಲತತ್ವವನ್ನು ವ್ಯಾವಹಾರಿಕವಾಗಿ ಚರ್ಚಿಸಿ ಅರ್ಜುನನಂಥ ಕ್ಷತ್ರಿಯನ ಕರ್ತವ್ಯ ಏನು ಎಂಬುದನ್ನು ಶ್ರೀ ಕೃಷ್ಣನು ಹೇಳಿದ್ದಾನೆ.



"ನೀನು ಕರ್ತನಲ್ಲ, ನಿಮಿತ್ತಮಾತ್ರ ನಿದ್ದೀ" ಎಂಬುದನ್ನು ಪ್ರತ್ಯಕ್ಷ ತೋರಿಸುವುದಕ್ಕಾಗಿ ಕೃಷ್ಣನು ವಿಶ್ವರೂಪವನ್ನು ತೋರಿಸಿದನು. ವಿಶ್ವರೂಪವೆಂದರೆ ಕಾಲ ಸ್ವರೂಪ. ಭೂತ, ಭವಿಷ್ಯ ಮತ್ತು ವರ್ತಮಾನ ಮೂರು ಕಾಲಗಳನ್ನು ಏಕತ್ರ ತಂದ ಇತಿಹಾಸ ಮೂರ್ತಿ. ಯಾವುದನ್ನು ನೀವು ಭಾವೀ ಅಥವಾ ಅದೃಷ್ಟವೆಂದು ಹೇಳುವಿರೋ ಅದು ಈಶ್ವರನ ದೃಷ್ಟಿಯಿಂದ ವರ್ತಮಾನವಾಗಿದೆ, ಜ್ಞಾತವಾಗಿದೆ ಎಂದು ಅರ್ಜುನನಿಗೆ ತಿಳಿಸಿಕೊಟ್ಟನು. ಆದರೂ ಕೊನೆಯಲ್ಲಿ "ಹೀಗೆ ಇದ್ದರೂ ನಿನ್ನ ಇಚ್ಛೆ ಹೇಗಿದೆಯೋ ಹಾಗೆ ಮಾಡು" ಎಂದು ವಿಚಾರ ಸ್ವಾತಂತ್ರ್ಯವನ್ನು ನೀಡಿದ್ದಾನೆ.

ವೇದವ್ಯಾಸರು ಕೃಷ್ಣಾರ್ಜುನರ ಈ ದಿವ್ಯ ಸಂದೇಶವನ್ನು ಇತಿಹಾಸವೆಂದು ಜಗತ್ತಿನ ಮುಂದೆ ಇಡದೆ ಮಾನವಮಾತ್ರರ ಹೃದಯದಲ್ಲಿ ವಾಸನಾರೂಪಿ ಪ್ರಬಲ ಶತ್ರುವಿನೊಡನೆ ಜೀವವು ಯಾವ ಸನಾತನ ಯುದ್ಧವನ್ನು ಮಾಡುತ್ತ ಬಂದಿದೆಯೋ ಅದರಲ್ಲಿ ಮನುಷ್ಯನು ನಿರಹಂಕಾರಿಯಾಗಿ ಹೇಗೆ ಯುದ್ಧಮಾಡಬೇಕು [ಯುದ್ಧಸ್ವ ವಿಗತಜ್ವರಃ] ಎಂಬ ಧರ್ಮರಹಸ್ಯವನ್ನು ವಿಶದವಾಗಿ ತಿಳಿಹೇಳಿದ್ದಾರೆ. ಅದರಿಂದ ಹೃದಯದಲ್ಲಿ ಅಥವಾ ಸಮಾಜದಲ್ಲಿ ಯಾವ ದುಷ್ಪ್ರವೃತ್ತಿ ಪ್ರಬಲವಾಗಿರುವುದೋ ಅದರೊಡನೆ ಯುದ್ಧಮಾಡುವ ಪ್ರತಿಯೊಬ್ಬ ಯೋಧನಿಗೆ ಭಗವದ್ಗೀತೆಯು ಗುರೂಪದೇಶದಂತಿದೆ.

ಉಪದೇಶ :— ಸುಖದುಃಖದಿಂದ ಸಹಜವಾಗಿ ಹತ್ತಿಕ್ಕುವಷ್ಟು ದುರ್ಬಲನಾಗಬೇಡ. ಸೋಲು ಗೆಲುವಿಗೂ ಲಕ್ಷಿಸಬೇಡ. ಯಾರು ಸತತವಾಗಿ ಪ್ರಯತ್ನಿಸುವರೋ, ಆಗ್ರಹ ಹಿಡಿಯುವರೋ ಅವರು ತಮ್ಮ ಮನಸ್ಸಿನಲ್ಲಿ ಇದ್ದುದನ್ನು ದೊರಕಿಸಿಕೊಳ್ಳುತ್ತಾರೆ. ಅದರಿಂದ ನಿರ್ಮಲರಾಗಿರಿ, ವೀರರಾಗಿರಿ. ದೀರ್ಘ ಪ್ರವಾಸಕ್ಕಾಗಿ ಹೊರಟ ಜನರಿಗೆ ಥಂಡಿಯನ್ನು ಸಹಿಸಬೇಕಾಗುತ್ತದೆ. ದಾರಿಯಲ್ಲಿ ಹಗಲೂ ಇರುತ್ತದೆ, ರಾತ್ರಿಯೂ ಇರುತ್ತದೆ, ಯಾತ್ರೆಯಂತೂ ಮುಂದುವರಿಯಲೇ ಬೇಕು. ಸಮಸ್ತ ಸಮಾಜದ ಜೀವನಯಾತ್ರೆಯು ವ್ಯಕ್ತಿಗತ ಸ್ವಾರ್ಥಕ್ಕಾಗಿ, ಸಂಕುಚಿತ ಸ್ವಾರ್ಥಕ್ಕಾಗಿ ಇರಬಾರದು. ಈ ಯಾತ್ರೆಗೆ ಹೊರಟ ಜನ "ಸರ್ವ ಭೂತಹಿತೇ ರತಾಃ" ಆಗಿರಬೇಕು ಅವರ ಮನಸ್ಸಿನಲ್ಲಿ ಯಾರ ವಿಷಯದಲ್ಲಿಯೂ ದ್ವೇಷ ಭಾವವಿರಕೂಡದು. ಯಾವಜನ ಗೀತಾಧರ್ಮಿಯಾಗಿರುವರೋ ಅವರು ಕೇವಲ ಈಶ್ವರನನ್ನು ಗುರುತಿಸುತ್ತಾರೆ. ಎಲ್ಲರೂ ಈಶ್ವರನದೇ ಮಕ್ಕಳಾಗಿರುವುದರಿಂದ ಅವರು ಯಾರ ದ್ವೇಷವನ್ನೂ ಮಾಡುವದಿಲ್ಲ. ಅವರ ಯುದ್ಧ ಕೇವಲ ಪಾಪದೊಡನೆ, ಅನಾಚಾರದೊಡನೆ ಮತ್ತು ಅತ್ಯಾಚಾರದೊಡನೆ ಎಂದೆಂದಿಗೂ ನಡೆಯುವದು. ಕಾಮರೂಪಿ–ವಾಸನಾರೂಪಿ– ದುರಾಸದನಾಗಿರುವ ಶತ್ರುವಿನ ಅಸಹಕಾರವನ್ನು ದೃಢಶಸ್ತ್ರದಿಂದ ಛೇದಿಸಿ ಅವರು ಅವಿಚಲ ಮೋಕ್ಷಪದದ ಸ್ವರಾಜ್ಯವನ್ನು ದೊರಕಿಸುವರು. ಇಂಥ ಧರ್ಮ ಯುದ್ಧದ ಆಹ್ವಾನವನ್ನು ತಿರಸ್ಕರಿಸತಕ್ಕದಲ್ಲ. ಅದನ್ನು ತಿರಸ್ಕರಿಸುವುದರಿಂದ ಸ್ವಧರ್ಮ ಮತ್ತು ಕೀರ್ತಿ ಇವೆರಡರ ನಾಶವಾಗುತ್ತದೆ. ಮತ್ತು ನಮ್ಮ ಉಡಿಯಲ್ಲಿ ಕೇವಲ ಪಾಪ ಮತ್ತು ತೊಂದರೆ ಬಂದು ಬೀಳುತ್ತದೆ. ಧರ್ಮಯುದ್ಧದಲ್ಲಿ ಕಳೆದುಕೊಳ್ಳಬೇಕಾದುದು ಏನೂ ಇಲ್ಲ. ಗೆದ್ದರೂ ಧರ್ಮದ ವಿಜಯ; ಸೋತರೂ ಧರ್ಮದ್ದೇ ವಿಜಯವೆನಿಸುತ್ತದೆ.

ಗೀತೆಯೆನ್ನುತ್ತದೆ, ನೀವು ಅಲ್ಪ ಸಂಖ್ಯಾಕರಿದ್ದೀರಿ ಎಂದು ಚಿಂತೆಮಾಡಬೇಡಿ. ನೀವು ನಿಮ್ಮ ಹೃದಯವನ್ನು ಉನ್ನತವನ್ನಾಗಿ ಮಾಡಿಕೊಳ್ಳಿ; ನೀವು ಶ್ರೇಷ್ಠರಾಗಿರಿ. ಶ್ರೇಷ್ಠರ ಹಿಂದೆ ಹೋಗುವುದೇ ಜನರ ಸ್ವಭಾವ. ನೀವು ಅಲಸಿಗಳಾದರೆ, ನಿಂತಲ್ಲಿಯೇ ನಿಂತುದಾದರೆ ಸಮಾಜದ ನಾಶಮಾಡಿದ ಪಾಪ ನಿಮ್ಮ ತಲೆಯ ಮೇಲೆ ಬರುವುದು.

ಧರ್ಮವೀರರ ಶಿಕ್ಷಣವು ಹೇಗಿರಬೇಕೆಂಬುದನ್ನು ಗೀತೆ ಹೇಳಿದೆ. ಅವರು ಇಂದ್ರಿಯ ಲೋಭದಲ್ಲಿ ಬೀಳಬಾರದು, ಸುಖದುಃಖಗಳಿಂದ ವಿಚ-ಲಿತರಾಗಬಾರದು. ಲಾಭಹಾನಿಗಳಿಂದ ಸಂತೋಷವನ್ನಾಗಲೀ, ದುಃಖವನ್ನಾಗಲೀ ಹೊಂದಬಾರದು. ಅವರು ವೀರರಿರುವುದರಿಂದ ಕ್ಷುದ್ರಕೆಲಸಗಳಲ್ಲಿ ಮುಳುಗಿ ತಮ್ಮ ಜೀವನವನ್ನು ಹಾಳುಮಾಡಿಕೊಳ್ಳಬಾರದು. ಧರ್ಮಕ್ಕೆ ಗ್ಲಾನಿ ಬಂದು, ಅಧರ್ಮದ ಹೆಚ್ಚಳವಾದಾಗಲೆಲ್ಲ ಭಗವಂತ ಸ್ವತಃ ಅವತಾರ ಮಾಡುತ್ತಾನೆಂಬ ಮಾತಿನಲ್ಲಿ ವಿಶ್ವಾಸವಿಟ್ಟು ಭಗವಂತನ ಧರ್ಮ ಸಂಸ್ಥಾಪನೆಯ ಕಾರ್ಯವನ್ನು ಎತ್ತಿ ಹಿಡಿಯಲು ಬದ್ಧಕಂಕಣನಾಗಿರಬೇಕು. ದುಷ್ಟಕರ್ಮಗಳ ಗಾಳಿಯೂ ಸೋಕದಂತೆ ಅವರು ನೋಡಿಕೊಳ್ಳಬೇಕು. ಸತ್ಕರ್ಮಗಳ ರಕ್ಷಣೆಮಾಡಲು ಸಜ್ಜಾಗಿರಬೇಕು. ಕರ್ಮದ ಹಿಂದೆ ಕಷ್ಟ

ಪಿದೆಯೆಂಬ ಭೀತಿಯಿಂದ ಅಥವಾ ವಿಚಾರದಿಂದ ಆತನು ಕರ್ಮವನ್ನು ಬಿಡಲಿಕ್ಕಿಲ್ಲ. ಸಿಕ್ಕಷ್ಟರಲ್ಲಿಯೇ ತೃಪ್ತನಾಗಿ ತನ್ನ ಕಾರ್ಯವನ್ನು ಮುಂದುವರಿಸುತ್ತಲೇ ಇರುವನು. ಎಲ್ಲ ಕೆಲಸವನ್ನು ನಿಮಿತ್ತಮಾತ್ರನಾಗಿ ನಿರ್ವಹಿಸುತ್ತಿದ್ದೇನೆಂದು ಆತನು ಭಾವಿಸುವನು. ಕೆಲಸ ಮಾಡುತ್ತಿರುವಾಗಲೇ ಮರಣ ಬಂದರೂ ಆತನು ಅಂಜುವದಿಲ್ಲ. ಯಾಕಂದರೆ ಬಂದರ ಹಿಂದೆ ಇನ್ನೊಂದು ಜನ್ಮ ಒಂದೇ ತೀರುವುದು. ಮತ್ತು ಈ ಜನ್ಮದಲ್ಲಿ ಸತ್ಕಾರ್ಯಗಳನ್ನು ಮಾಡಿದ್ದಿದ್ದರೆ ಮತ್ತು ವೀರ ಮರಣವನ್ನು ಪಡೆದಿದ್ದರೆ ಮುಂದಿನ ಜನ್ಮವು ಇದಕ್ಕಿಂತ ಕೆಟ್ಟದಾಗುವ ಸಂಭವವೇ ಇಲ್ಲ.

ಜನರ ಜೀವನ ಮರಣ, ಕಲ್ಯಾಣ ಅಕಲ್ಯಾಣ, ಕಾಲಪುರುಷ ಪರಮಾತ್ಮನ ಕೈಯಲ್ಲಿ ಇವೆ. ನಾವೆಲ್ಲರೂ ಆತನ ತಾಳಕ್ಕೆ ಕುಣಿಯುವವರು. ಇಡೀ ಜಗತ್ತಿನ ಅಧಿಕಾರ ಮತ್ತು ಸುಖ ನನ್ನ ಕೈಯ್ಯಲ್ಲಿಯೇ ಇರಬೇಕೆಂದು ಹಾರಾಟಮಾಡುವ ನರರಾಕ್ಷಸರು ಕೆಲವರು ಇದ್ದೇ ಇರುತ್ತಾರೆ. ಐಷಾರಾಮ ಮತ್ತು ವಿಲಾಸ ಇವೇ ತಮ್ಮ ಜೀವನದ ಧ್ಯೇಯವೆಂದು ಅವರು ಭಾವಿಸುತ್ತಾರೆ. ಅದಕ್ಕಾಗಿ ಅನ್ಯಾಯಮಾಡಲಿಕ್ಕೂ ಅವರು ಹಿಂದೆ ಮುಂದೆ ನೋಡುವುದಿಲ್ಲ. ಆಡಂಬರವನ್ನು ಮಾಡಿ ಅವರು ಜಗತ್ತಿಗೆ ಮೋಸಮಾಡುತ್ತಾರೆ.

ಸೈತಾನನು ಈ ಜಗತ್ತನ್ನು ಆಕ್ರಮಿಸಿದ್ದಾನೆ. ಆ ಸ್ಥಳದಲ್ಲಿ ಈಶ್ವರನ ರಾಜ್ಯಸ್ಥಾಪನೆ ಮಾಡಲು ನಾವೆಲ್ಲರೂ ಸಿದ್ಧತೆ ಮಾಡಬೇಕಾಗಿದೆ. ಈಶ್ವರನ ಈ ಸೇವೆ ನಿಮ್ಮ ಪಾಲಿಗೆ ಬಂದಿದೆ. ಆದರಿಂದಲೇ ಜೀವನ ರಸಮಯವಾಗಿದೆ.

ಚಿತ್ತವು ಯಾವುದಾದರೊಂದು ವಿಷಯದಲ್ಲಿ ಆಸಕ್ತವಾಗಿದ್ದರೆ ಜೀವನವು ಏಕಾಂಗಿಯಾಗಿ ಪಾಮರವೆನಿಸುತ್ತದೆ. ಎಲ್ಲ ವಿಷಯಗಳಲ್ಲಿಯೂ ಮನಸ್ಸು ಅನಾಸಕ್ತವಾದಾಗ, ಕೇವಲ ಕರ್ತವ್ಯಮಾಡುವುದರಲ್ಲಿಯೇ ಮನಸ್ಸು ತನ್ಮಯವಾದಾಗ, ಆತನಲ್ಲಿ ಅಸಂಖ್ಯವಿಭೂತಿಗಳು ಪ್ರಕಟವಾಗುತ್ತವೆ; ಎಲ್ಲ ಸಿದ್ಧಿಗಳೂ ಅವನ ಸೇವೆಗಾಗಿ ಧಾವಿಸುತ್ತವೆ. ಮತ್ತು ಆತ್ಮೈಕ್ಯದ ಅನುಭವವಾಗುವುದರಿಂದ ಮನುಷ್ಯನು ಶಾಂತಿ ಮತ್ತು ಸಾಮರ್ಥ್ಯವನ್ನು ಪ್ರಾಪ್ತ ಮಾಡಿಕೊಳ್ಳುತ್ತಾನೆ.

ಇಂದು ಪರಸ್ಪರ ದ್ವೇಷವು ನಾಲ್ಕೂ ಬದಿಯಿಂದ ಜೀವನವನ್ನು ಕಲುಷಿತ ಗೊಳಿಸುತ್ತಿರುವಾಗ "ನಿರ್ವೈರಃ ಸರ್ವಭೂತೇಷು" ಮತ್ತು "ಆತ್ಮೌಪಮ್ಯೇನ ಸರ್ವತ್ರ" ಎಂಬ ತ್ರಿಕಾಲಾಬಾಧಿತ ಸಂದೇಶವು ನಮ್ಮ ಮಾನವತೆಯ ರಕ್ಷಣದ ಮತ್ತು ಉತ್ಕರ್ಷೆಯ ಸಂಜೀವನ ಮಂತ್ರವಾಗಿದೆ. ಜೀವನ ಮರಣವು ಗೂಢವಾಗಿರುವಂತೆ ಗೀತೆಯ ಸಂದೇಶವೂ ಗೂಢವಾಗಿದೆ. ಜೀವನ ಸಂಗ್ರಾಮದಲ್ಲಿ ಜೀವನ ಸಾಫಲ್ಯ ಮತ್ತು ಜೀವನ ಸಂಸಿದ್ಧಿ ಪ್ರಾಪ್ತ ಮಾಡಿಕೊಳ್ಳುವ ಮಾರ್ಗ ಅಥವಾ ಯೋಗವು ನಿಮಗೆ ಧರ್ಮಕ್ಷೇತ್ರ, ಕುರುಕ್ಷೇತ್ರದ ಮೇಲೆ ಹಾಡಿದ ಈ ಆಧ್ಯಾತ್ಮಿಕ-ಸಂಗೀತದಲ್ಲಿ ದೊರೆಯುವುದು. —

## ❋ ಕ ವ ನ ❋

ಒಡೆದು ಹೋದ ಗಡಿಗೆಯಲ್ಲಿ ನೀರು ನಿಲ್ಲಬಲ್ಲದೆ,
ಬರಡು ಆದ ಜೀವದಲ್ಲಿ ಉತ್ಸಾಹ ಮೂಡಬಲ್ಲದೆ,

ಕಳೆದು ಹೋದ ಕಾಲವಿನ್ನು ಮರಳಬಲ್ಲದೆ.
ನಡೆದು ಹೋದ ಘಟನೆಯನ್ನು ಮರೆಯಲಾಗದೆ,
ಸುಳಿಗೆ ಸಿಕ್ಕ ದೋಣಿ ಮತ್ತೆ ತೇಲಬಲ್ಲದೆ.

ಬಿರಿದ ಮೊಗ್ಗು ಮತ್ತೆ ಮೊಗ್ಗು ಆಗಬಲ್ಲದೆ,
ಮಾನ ಹೋದ ಮನುಜಗಿನ್ನು ಮಾನ ಮರಳ ಬಲ್ಲದೆ.
ಜೀವ ಹೋದ ದೇಹದಲ್ಲಿ ನಗೆಯು ತೇಲಬಲ್ಲದೆ.

ಹೋದ ಜೀವ ಕಳೆದ ಕಾಲ ಮತ್ತೆ ತಿರುಗಿಬಾರದು
ಬರಡು ಆದಜೀವನದಲ್ಲಿ ಉತ್ಸಾಹ ಮೂಡಿಬಾರದು,
ಹೋದ ಮಾನ ಮನುಜಗಿನ್ನು ಮರಳಲಾರದು.

ಹೊಗುವಾಗ ಪುಣ್ಯ ಕರ್ಮ
ಮಾಡಲೇನು ಬಂತು ಭಾಗ್ಯ
ಇರುವ ತನಕ ಶ್ರೀ ಶ್ರೀ
ಸಿದ್ಧಲಿಂಗೇಶ್ವರನ ಕೃಪೆಗೆ ಪಾತ್ರ.

—ಸುಶೀಲಾ ದೇವಿ



# ನಂಬಿಕೆ

—ಬಿ. ಆರ್. ವೆಂಕಟೇಶಮೂರ್ತಿ

**ನಂಬಿದೊಡೆ ನಾಕ ; ನಂಬದೊಡೆ ನರಕ !**

ಮೇಲಿನ ಸಾಲು ಎಷ್ಟು ಅರ್ಥವತ್ತಾದುದು ! ಈ ನಂಬಿಕೆ ಅನಂತ ಕಾಲದುದ್ದಕ್ಕೂ ಮಾನವನ ಜೀವಮಾನದಲ್ಲಿ ಹಾಸುಹೊಕ್ಕಾಗಿ ಹೆಜ್ಜೆಯಿಡುತ್ತಾ ಬರುತ್ತಿದೆ. ನಂಬಿಕೆ,, ಅಪನಂಬಿಕೆಗಳ ಮಧ್ಯದ ಸೇತುಬಂದಿ ನಮ್ಮ ಈ ಮಾನವ. ಇವುಗಳ ದ್ವಂದ ತುಮುಲವೇ ಮಾನವನ ಬುದ್ಧಿವಿಕಾಸಕ್ಕೆ ನಾಂದಿ. ಹುಚ್ಚುಮನುಷ್ಯನ ಹತ್ತು ಮುಖಗಳಲ್ಲೊಂದು ಈ ನಂಬಿಕೆ.

ಇದು ಕೆಲವು ಸಲ ಹಣತೆಯ ಬೆಳಕಿನಂತೆ ಪ್ರಕಾಶಿಸುತ್ತದೆ. ಮಗದೊಮ್ಮೆ ಅಪನಂಬಿಕೆಯ ಸುಳಿಯಲ್ಲಿ ಸಿಕ್ಕಾಗ ಮಂಕಾಗುತ್ತದೆ. ಅಖಂಡ ಜ್ಯೋತಿಯಂತೆ ನಿರಂತರವೂ ಮಾನವನ ಮನದಲ್ಲಿ ಒಂದಲ್ಲ ಒಂದು ರೀತಿ ಬೆಳಗುತ್ತಲೇ ಇರುತ್ತದೆ. ಜೀವನಾಧಾರಕ್ಕೆ ಗಾಳಿ, ನೀರು, ಆಹಾರ ಹೇಗೆ ಮುಖ್ಯವೋ ಹಾಗೆಯೇ ಈ ನಂಬಿಕೆಯೂ ಬೇಕೇಬೇಕು. ಇಲ್ಲದಿದ್ದರೆ ಬಾಳು ದುರ್ಭರವಾಗುತ್ತದೆ. ಇದರ ಶಕ್ತಿ ಅನಂತ, ಪಾತ್ರ ಮಹತ್ತರ.

ನಂಬಿಕೆ ಎಂದರೆ ತನ್ನಲ್ಲಿ ತನಗೆ ನಂಬಿಕೆ ಅಥವಾ ಇತರರೊಡನೆ ಅರಿತು ಸಮರಸವಾಗಿ ಹೊಂದಿಕೊಂಡು ಬಾಳುವಿಕೆ.

ತನ್ನಲ್ಲಿ ತನಗೆ ನಂಬಿಕೆ ಕೆಟ್ಟು ಆತ್ಮಕ್ಲೈಬ್ಯವನ್ನನುಭವಿಸಿದ ಪಾರ್ಥನಿಗೆ ಶ್ರೀಕೃಷ್ಣ ಪರಮಾತ್ಮ ಗೀತೋಪದೇಶ ಮಾಡಿ ತನ್ನನ್ನು ನಂಬಿ ನಡೆ ಎಂದು ನಿಷ್ಕಾಮ ಕರ್ಮಯೋಗ ಹೇಳಿ ನಂಬಿಕೆ ಹುಟ್ಟಿಸಬೇಕಾಯಿತು.

ತನ್ನಾತ್ಮಬಲದಿಂದಲ್ಲವೇ ವಸಿಷ್ಠ ಮಹಾಮುನಿ, ಮದೋನ್ಮತ್ತನಾಗಿ ಏರಿಬಂದ ಗಾಧಿ ಪುತ್ರನನ್ನು ಭಂಗಿಸಿ ತಪಸ್ಸಿಗೆ ತೆರಳುವಂತೆ ಮಾಡಿ ಬ್ರಹ್ಮರ್ಷಿ ವಿಶ್ವಾಮಿತ್ರನನ್ನು ಲೋಕಕ್ಕೆ ಕೊಟ್ಟದ್ದು. "ಧಿಕ್‌ಬಲಂ ಕ್ಷತ್ರಿಯ ಬಳಂ ಬ್ರಹ್ಮ ತೇಜೋಬಲಂ ಬಲಂ" ಮುಂತಾಗಿ ಆತ್ಮಬಲದ ಹಿರಿಮೆಯನ್ನು ಲೋಕಕ್ಕೆ ಸಾರಿದ ಆ ವಸಿಷ್ಠ ಮಹಾಮುನಿ ತನ್ನಲ್ಲಿ ತನಗೆ ನಂಬಿಕೆ ಇಲ್ಲದವನು ಜೀವಶವವೇ ಸೈ ! ಆತ್ಮಬಲದಲ್ಲಿ ನಂಬಿಕೆ, ಸಾಹಸ, ಸ್ವಾಭಿಮಾನಕ್ಕೆ ನಾಂದಿ ಮತ್ತು ಅದರಿಂದ ಕೀರ್ತಿ, ಕಾಮನೆಗಳಿಗೆ ಹೆದ್ದಾರಿ.

ಸಂಘಜೀವಿ ಮಾನವ, ಒಬ್ಬರನ್ನೊಬ್ಬರು ನಂಬದಿದ್ದರೆ ಏನು ಗತಿ ? ಪ್ರತಿಯೊಂದನ್ನೂ ಪ್ರತಿಯೊಬ್ಬರೂ ಪ್ರತ್ಯಕ್ಷ ಪ್ರಮಾಣವಾಗಿ ಅಳೆದು ಸುರಿದು ನೋಡಲಾರಂಭಿಸಿದರೆ ಅವರ ಜೀವನ ದುರ್ಭರವಾದೀತು ! ಉದಾಹರಣೆಗೆ ವೈದ್ಯನ ಮೇಲೆ ನಂಬಿಕೆ ಇಲ್ಲದಿದ್ದರೆ ಅವನ ಔಷಧದಿಂದೇನಾದೀತು ? ನಂಬಿಕೆಯಿಂದಲೇ ಅರ್ಧ ಖಾಯಿಲೆ ವಾಸಿ. ಅದಕ್ಕೂ ಮೀರಿ ಮಾನವ ಪ್ರಯತ್ನವೆಲ್ಲಾ ಮುಗಿದಾಗ ಪರಮಾತ್ಮನಲ್ಲಿ ನಂಬಿಕೆಯ ಪ್ರಾರ್ಥನೆ ಮನಸ್ಸಿಗೆಷ್ಟೋ ನೆಮ್ಮದಿ. ನಂಬಿಕೆಯಿಂದ ಮಾನಸಿಕ ಸುಖ ಹೆಚ್ಚು. ನಂಬಿಕೆಯಶಕ್ತಿ ಅಸಾಧಾರಣವೆನ್ನುವುದಕ್ಕೆ ಆ ಶಕುನಿಯ ಕುಟಿಲ ದ್ಯೂತದಲ್ಲಿ ಸೋತ ಪಾಂಡವರು ಧರ್ಮಕ್ಕೆ ಕಟ್ಟುಬಿದ್ದು ತಲೆತಗ್ಗಿಸಿರಲು, ಆ ಅಹಂಕಾರಿ, ದುರುಳ, ದುಶ್ಶ್ಯಾಸನನು ಅಬಲೆ, ಅಸಹಾಯಕಿ ಪಾಂಚಾಲಿಯ ಮುಡಿಎಳೆದು ಸಭಾಮಧ್ಯದಲ್ಲಿ ಅಟ್ಟಹಾಸದಿಂದ ಅವಳುಟ್ಟ ಸೀರೆಯನ್ನೇ ಸೆಳೆದು ಅಪಮಾನ ಮಾಡಲೆತ್ನಿಸಿದಾಗ, ಅಸಹಾಯಳಾಗಿ ತನ್ನಣ್ಣ ಕೃಷ್ಣನೊಬ್ಬನೇ ಗತಿ ಎಂದು ನಂಬಿ ಮೊರೆಯಿಡಲು ಅಕ್ಷಯವಾಯಿತಲ್ಲವೆ ಅವಳ ಮಾನ, ತುಂಬಿ ಹರಿದ ಸೀರೆಯ ರೂಪದಲ್ಲಿ !

ತರಳ ಪ್ರಹ್ಲಾದನು ತನ್ನ ತಂದೆಯ ದುರುಳತನಕ್ಕೆ ಬೇಸತ್ತು ಕಂಬದಲ್ಲಿಯೂ ಹರಿಯಿರುವನೆಂದೂ ಮತ್ತು ಕೂಗಿದಾಗ ಬಂದೇ ಬರುವನೆಂದು ನಂಬಿ ಹೇಳಿದಾಗಲ್ಲವೇ, ಕಂಬದಿಂದಲೇ ಹಾರಿಬಂದು ಅವನನ್ನು ಸಲಹಿ,

ಹಿರಣ್ಯಕಶಿಪುವನ್ನು ಸಿಗೆದು ಸೀಳಿದ್ದು ನಮ್ಮ ನರಹರಿ ನಾರಸಿಂಹ.

ಹೀಗೆ "ನಂಬಿ ಕೆಟ್ಟವರಿಲ್ಲವೋ ರಂಗಯ್ಯನ ನಂಬದೆ ಕೆಟ್ಟರೆ ಕೆಡಲಿ" ಎಂದು ದಾಸವರೇಣ್ಯರು ಹಾಡಿಹೊಗಳಿದ್ದಾರೆ. ನಾಣ್ಯಕ್ಕೆ ಎರಡು ಮುಖದಂತೆ, ನಂಬಿ ಕೆಟ್ಟವರೂ ಉಂಟು ಈ ಜಗತ್ತಿನಲ್ಲಿ.

ಉದಾ :—ಲೋಕೋತ್ತರ ವೀರ ಜೂಲಿಯಸ್ ಸೀಸರ್ ತನ್ನ ಮಿತ್ರರ ಕುಟಿಲೋಪಾಯಕ್ಕೆ ಸಿಕ್ಕಿ ನಂಬಿ ಕೊಲೆಯಾದುದು. ನಂಬಿದ ನೆಚ್ಚಿನ ಗೆಳೆಯ ಬ್ರೂಟಸ್ ಅವನನ್ನು ಇರಿದುಕೊಂದ. ಸೀಸರ್ ಸರ್ವಾಧಿಕಾರಿಯಾಗುತ್ತಾನೆಂಬ ಅಪನಂಬಿಕೆಯಿಂದ ಬ್ರೂಟಸ್ ಮಿತ್ರ ದ್ರೋಹ ಮಾಡಿದ.

ಹಾಗೆಯೇ ಒಥೆಲೋ ದುರಂತ ನಾಟಕದಲ್ಲಿ ಒಥೆಲೋ ತನ್ನ ಮಿತ್ರನ ಮಾತಿನ ಮೋಡಿಗೆ ನಂಬಿ ತನ್ನ ನೆಚ್ಚಿನ ಪ್ರೇಯಸಿ ಡೆಸ್ಡಿಮೋನಳ ಶೀಲವನ್ನೇ ಸಂಕಿಸಿ ಕೊಲೆಗೈದು, ತಪ್ಪರಿವಾದಾಗ ತಾನೂ ಸತ್ತ.

ಉಪ್ಪುಂಡ ಮನೆಗೆ ಎರಡು ಬಗೆದ ಮೀರ್‌ಸಾಧಕನನ್ನು ನಂಬಿ ಕೆಟ್ಟ ನಮ್ಮ ಧೀರ, ವೀರ ಟಿಪ್ಪೂ ಸುಲ್ತಾನ್.

ಇವು ನಂಬಿಕೆಯ ವಿಪರ್ಯಾಸದ ಮತ್ತೊಂದು ಮುಖ !

ರಾಷ್ಟ್ರಗಳ ನಡುವೆ ವಿಶ್ವಾಸ ಬೆಳೆದಲ್ಲಿ ಸೌಹಾರ್ದ ವಾತಾವರಣ. ಅನ್ಯೋನ್ಯತೆ, ಪರಸ್ಪರ ಅರಿವು, ಪ್ರಗತಿ ಸಾಧಿಸಿ ಸುಖಸಂತೋಷ ತುಂಬಬಹುದು. ಇಲ್ಲವೇ ಅಪನಂಬಿಕೆಯ ಸುಳಿಯಲ್ಲಿ ಸಿಕ್ಕಾಗ ಯುದ್ಧ, ಮಾನಹಾನಿ, ಜನಹಾನಿ ಆದ್ದರಿಂದ ದೇಶಗಳ ಏಳ್ಗೆ, ಅಳಿವು ಈ ನಂಬಿಕೆ ಅಪನಂಬಿಕೆಗಳನ್ನು ಕೂಡ ಅವಲಂಬಿಸಿರುತ್ತದೆ ಎಂದರೆ ತಪ್ಪೇನೂ ಇಲ್ಲ.

ಎಷ್ಟೋ ವ್ಯವಹಾರಗಳಲ್ಲಿ ನಂಬಿಕೆಗೆ ಪ್ರಾಮುಖ್ಯ. ಅದಕ್ಕೆ "ಭೈರವಿ ವೆಂಕಟಸುಬ್ಬಯ್ಯ" ಹಣಕ್ಕಾಗಿ ರಾಗವನ್ನೇ ಒತ್ತೆಯಿಡುವ ಪ್ರಸಂಗವೇ ಸಾಕ್ಷಿ. ಮದುವೆಯಲ್ಲಿನ ಧರ್ಮೇಚ, ಅರ್ಥೇಚ, ಕಾಮೇಚ....ನಾತಿಚರಾಮಿ ಎಂಬುದನ್ನು ಗಮನಿಸಿದಾಗ ಗಂಡಹೆಂಡಿರಲ್ಲಿನ ನಂಬಿಕೆಯ ಪರಾಕಾಷ್ಠೆಯ ಗೋಚರ. ಅವರಲ್ಲಿ ಪರಸ್ಪರ ನಂಬಿಕೆ ಇಲ್ಲದಿದ್ದಲ್ಲಿ ಬಾಳೆಲ್ಲಾ ಬರೀ ದುಃಖಮಯ. ಹುಟ್ಟೂರನ್ನು ತೊರೆದು ಗಂಡನನ್ನೇ ನಂಬಿ ಅತ್ತೆಯ ಮನೆಗೆ ತೆರಳುವಾಗ ಹೆಣ್ಣಿನ ನಂಬಿಕೆ ಎಷ್ಟು ತ್ಯಾಗದ ಸಂಕೇತ! ಸಾಧು ಸಂತರೆಲ್ಲರೂ ನಿರಂತರವಾಗಿ ಬೋಧಿಸುತ್ತಿರುವುದು ದೇವನಲ್ಲಿನ ಅಚಲ ನಂಬಿಕೆ. ಅದರಿಂದ ಪರಮಮುಕ್ತಿ ಮಾರ್ಗವೆಂದು ಎಲ್ಲರೂ ನಿರಂತರ ಸಾಗುತ್ತಿರುವುದು.

ನಂಬಿಕೆಯ ಇನ್ನೊಂದು ಮೊಗ ಮೂಢನಂಬಿಕೆ.

ಆದಿಕಾಲದಿಂದಲೂ ಮಾನವನು ಜಗತ್‌ಸೃಷ್ಟಿಯನ್ನು ಕೌತುಕ, ದಿಗ್ಭ್ರಮೆಯಿಂದ ದಿಗ್ಮೂಢನಾಗಿ ಅವಲೋಕಿಸುತ್ತಿದ್ದಾನೆ. ಅನಂತ ನಕ್ಷತ್ರರಾಶಿ, ಸೂರ್ಯಚಂದ್ರ, ಪ್ರಳಯ, ಭೂಕಂಪ, ಸಿಡಿಲು' ಸಾವು ಮುಂತಾದ ನಿಸರ್ಗದ ಗಂಭೀರ ರುದ್ರ ರೂಪವನ್ನು ನೋಡಿದಾಗ ಮಾನವ ಹೆದರಿ ನೀರಾಗಿ ಅದನ್ನ ನಿವಾರಿಸಲು ಅಗೋಚರಶಕ್ತಿ ದೇವತೆಗೆ ಮೊರೆಹೊಕ್ಕ. ತನ್ನ ಮನಸ್ಸಿನ ಭೀತಿ ನಿವಾರಿಸಲು ಯಜ್ಞಯಾಗದಿಗಳಿಂದ ಭೂತ ತೃಪ್ತಿ ಪಡಿಸಲಾರಂಭಿಸಿದ. ಸಾವಿನ ನಿಗೂಢವನ್ನರಿಯದೆ ಭೂತ, ಪಿಶಾಚಿ, ಶಾಕಿನಿ, ಡಾಕಿನಿಯರನ್ನು ತನ್ನ ಹೆದರಿಕೆ ನಿವಾರಿಸಲು ಸೃಷ್ಟಿಸಿ ಪೂಜಿಸಿ ಪಶು, ನರಬಲಿಗಳ ಮೂಲಕ ತೃಪ್ತಿಪಡಿಸಲಾರಂಭಿಸಿದ. ಹೀಗೆ ಹೆದರಿಕೆಯೇ ಮೂಲವಾಗಿ ಮೂಢನಂಬಿಕೆ ಆರಂಭವಾಯಿತೆನ್ನಬಹುದು. ರೋಗಬಂದಾಗ ಮಾರಿಗೆ ಸಾವಿರಾರು ಪಶುಬಲಿ, ಪುನರ್ಜನ್ಮದ ಭ್ರಾಂತಿಯಲ್ಲಿ ಸತ್ತಮೇಲೆ ತನ್ನ ಹೆಣದ ಜೊತೆ ಇರಲು ಈಜಿಪ್ಟಿನ ಪಿರಮಿಡ್ಡುಗಳಲ್ಲಿ ಆಮರಣಾಂತ ಕಾರಾಗೃಹವಾಸ ಮಿಕ್ಕವರಿಗೆ, ಸತ್ತವರ ಭೂತ ತೃಪ್ತಿಗಾಗಿ ನೂರಾರು ಪಶು ಬಲಿ, ಒಂದೇ ಎರಡೆ ನೂರಾರು ಬಗೆಯ ಮೂಢನಂಬಿಕೆಗಳು.

ಪ್ರತಿ ಶತಮಾನದಲ್ಲೂ ಒಂದೊಂದು ಬಗೆ ಮೂಢನಂಬಿಕೆ ಬೆಳೆಯಿತು. ಒಂದನ್ನು ನಿವಾರಿಸಿದಾಗ ಮತ್ತೊಂದು ಪುಟಿದೇಳುತ್ತದೆ (ಹಳೇ ನೀರನ್ನು ಹೊಸ ನೀರು ಕೊಚ್ಚುವಂತೆ) ಹಿಂದಿನ ಜನಾಂಗ ಮಾಡಿದ ಆಚರಣೆ ಅವರಿಗೆ ಸಮಾಧಾನವಾಗಿದ್ದರದ, ಮುಂದಿನ ಪೀಳಿಗೆ ಅರ್ಥ ತಿಳಿಯದೆ ಅರ್ಥಂಬರ್ಥ ಆಚರಿಸುವ ಮನೋಭಾವ ಇದ್ದೇಇರುತ್ತದೆ.



ಪ್ರತಿಯೊಂದು ದೇಶದ ಇತಿಹಾಸದಲ್ಲಿ ಈ ಮೂಢನಂಬಿಕೆ ಹಾವಳಿ ನಡದೇ ಇದೆ. ಮತದ ಅಂಧಾನುಕರಣೆ, ಪರಮತ ಅಸಹಿಷ್ಣುತೆ ಮಧ್ಯಯುಗದಲ್ಲಿ ಪಾಶ್ಚಾತ್ಯ ದೇಶದಲ್ಲಿ ಶತಮಾನಗಟ್ಟಲೇ ಯುದ್ಧ ತಂದೊಡ್ಡಿ ಧರ್ಮದ ಹೆಸರಿನಲ್ಲಿ ನಿರಂತರ ನಿರಪರಾಧಿಗಳ ಶೋಷಣೆ, ಸಂಹಾರವಾಯಿತು.

ಜ್ಞಾನಾರ್ಜನೆಯಲ್ಲಿ ತೊಡಗಿದ ಗೆಲಿಲಿಯೊ ಸಾಕ್ರೆಟೀಸ್ ಮುಂತಾದ ಮೇಧಾವಿಗಳು ಈ ಮೂಢನಂಬಿಕೆ ಸುಳಿಯಲ್ಲಿ ಸಿಕ್ಕಿ ತತ್ತರಿಸಬೇಕಾಯಿತು.

ಹಾಗೆಯೇ ನಮ್ಮ ದೇಶದಲ್ಲೂ ವೇದಾಂತ, ಉಪನಿಷತ್‌ಗಳು ಪರಿಪಕ್ವ ಜ್ಞಾನ ಬೋಧಿಸಿದರೂ ಗೀರ್ವಾಣ ಭಾಷೆಯಲ್ಲಿದ್ದುದರಿಂದ ಅದನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಅಪೂರ್ಣ ಪಂಡಿತರುಗಳು ತಮ್ಮದೇ ಆದ ವ್ಯಾಖ್ಯಾನಕೊಟ್ಟರು. ಬಹುಪಾಲು ಜನ ಅವಿದ್ಯಾವಂತರು, ಅಜ್ಞಾನಿಗಳು ಆಗಿರುವುದರಿಂದ ಇಂತಹವರ ಶೋಷಣೆಗೆ ಒಳಗಾದರು. ಇಂತಹವರು ಅಜ್ಞಾನಿಗಳನ್ನು ನಂಬಿಸಲು ಬಲು ಅಗ್ಗದ ಪವಾಡಗಳು ಇಂದ್ರಜಾಲ, ಮಹೇಂದ್ರಜಾಲಗಳನ್ನು ಮಾಡಿ ವಂಚಿಸಿದರು.

ಪ್ರತಿಯೊಂದು ಸಿದ್ಧಾಂತವೂ ಜ್ಞಾನ, ಜ್ಞಾನಿಗಳಿಂದ ಕೂಡಿದ್ದರೂ ಈ ಅರ್ಧ ಪಂಡಿತರ ವಿಶ್ಲೇಷಣೆ ಅನುಕರಣೆ ಅಸಂಬದ್ಧವಾಯಿತು. ಇದರಿಂದ ಅನೇಕ ಮೂಢನಂಬಿಕೆಗಳು ಉದ್ಭವವಾದವು.

ಉದಾ :—ಶುಚಿಯ ಸಂಕೇತವಾದ ಮಡಿ ಕೆಲವೇ ಜನರ ಸ್ವತ್ತಾಗಿ ಅಸಂಬದ್ಧವಾಗಿ ಆಚರಿಸಲ್ಪಟ್ಟು ಮಿಕ್ಕವರನ್ನು ತಿರಸ್ಕಾರದಿಂದ ನೋಡಿ, ಅದರಿಂದ ವಿಧವಾ ಸಮಸ್ಯ ಮುಂತಾದ ಭೂತಗಳಿಗೆ ಆಹ್ವಾನ ಕೊಟ್ಟಿತು. ಇಲ್ಲಿ ಶುಚಿಯ ಆತ್ಮಶುದ್ಧಿ ಮರೆಯಾಗಿ ದೈಹಿಕ, ಬಾಹ್ಯ ಶುದ್ಧಿಗೆ ಪ್ರಾಮುಖ್ಯ ಬಂದಿದ್ದು ಮೂಢ ನಂಬಿಕೆಯ ವಿಪರ್ಯಾಸ !

ಭವಿಷ್ಯದ ನಂಬಿಕೆಗಳು ಜ್ಯೋತಿಷ್ಯಕ್ಕೆ ಬುನಾದಿ. ಯಾರಿಗೆ ತಾನೇ ತಮ್ಮ ಭವಿಷ್ಯ ತಿಳಿಯಲು ಕಾತರವಿಲ್ಲ. ಆದರೆ ಆದೆಷ್ಟು ಮಂದಿ ಈ ವೈಜ್ಞಾನಿಕ ಶಾಸ್ತ್ರವನ್ನು ಸರಿಯಾಗಿ ಅರ್ಥಮಾಡಿಕೊಂಡು ಜ್ಯೋತಿಷ್ಯ ಹೇಳಬಲ್ಲರು. ಅರ್ಧ ಜ್ಞಾನಿಗಳೇ ಜಹುಪಾಲು ಮಂದಿ ಇವರ ಅಪದ್ಧ ಆಟಾಟೋಪದಿಂದ ಸುಳ್ಳಿನ ರಸಬುರುಡೆ ಮಾಲೆಗಳೇ ಉರುಳಿ ಬೀಳುವುದು ಹೆಚ್ಚು.

ಈ ಮೂಢನಂಬಿಕೆಗಳು ತೊಲಗಬೇಕಾದರೆ ಪರಿಪೂರ್ಣ ಜ್ಞಾನಾರ್ಜನೆಯೊಂದೇ ದಾರಿಯಾದರೂ, ಮಾನವನ ಮೂಲಭೂತವಾದ ಹೆದರಿಕೆ ಇರುವವರೆಗೂ ಒಂದಲ್ಲ ಒಂದು ರೀತಿ ಇವು ಕಾಡುತ್ತಲೇ ಇರುತ್ತದೆ. ಎಂಬುದು ಎಷ್ಟು ಕಠೋರ ಸತ್ಯ !

ಈ ನಂಬಿಕೆಯ ಸಂತಾನಕೆಲ್ಲಕ್ಕೂ ಸತ್ಯವೇ ಮುಖ್ಯ. ಜಗತ್ ಸತ್ಯದ ಹಿರಿಮೆ ಈ ನಂಬಿಕೆಯಲ್ಲಿದೆ. ಆದ್ದರಿಂದ ನಂಬಿಕೆಯು ಬುನಾದಿ ಚಿರಂತನ ಸತ್ಯ. ಮಿಕ್ಕವೆಲ್ಲವೂ ಗೌಣ ಮತ್ತು ಮಿಥ್ಯೆ. "ಸತ್ಯಮೇವ ಜಯತೇ ನಾನೃತಂ" ಎಂಬುದು ನಂಬಿಕೆಯ ನಿತ್ಯಸತ್ಯ.

---

## 'ಚೆನ್ನಕೇಶವನೆನಿಸಿಹೆ'

ಜೆ. ಬಿ. ಲಿಂಗರಾಜು

ಚೆನ್ನಕೇಶವ ನಿನ್ನ ದರುಶನ
ಪುಣ್ಯ ಪರವಶ ಬಾಳಿಗೆ
ನಿನ್ನ ನಾಮವ ಜಪಿಸೆ ಮಾನವ
ಧನ್ಯವೆನಿಸುವ ದೀವಿಗೆ।

ನಿನ್ನ ಮಂದಿರ ಸುತ್ತಿಬರುತಿರೆ
ಮನವು ಪಡೆವುದು ಚೇತನ
ಕಣ್ಮನಂಗಳ ಕಾಂತಿ ತುಂಬಿಕೆ
ರೂಪದೀಪವಾ ನಿಕೇತನ।

ದಿವ್ಯ ಮೂರುತಿ ನಲಿದು ನಿಂದಿಹ
ದೇಗುಲವದೇ ಪಾವನ
ಯುಗದ ಕತ್ತಲೆ ಕಳೆದು ಶಾಂತಿಯ
ಬೆಳಕು ಚಲ್ಲುವ ಕಾವನ।

ಕೆತ್ತಿಕಡೆದ ಕಲೆಯ ಚೆಲುವಿನ
ಶಿಲೆಯ ಸುಂದರ ಮಂದಿರ
ಸುತ್ತಿಬೆಳೆದ ಲತೆಯ ಮಡಿಲಿನ
ಕಲಾರೂಪದ ಹಂದರ।

ನಗುವ ಮೊಗದ ದೇವ ನೀನು
ಹರಸಿ ಶುಭವ ನೆಲಸಿಹೆ
ಮಗುವ ರೂಪದ ಚೆಲುವ ನೀನು
ಚೆನ್ನಕೇಶವನ ನೆನಿಸಿಹೆ।

# ಮನುಷ್ಯ ಜನ್ಮ ದೊಡ್ಡದು

—ಆರ್. ನಟರಾಜನ್,

## 1. ಮನುಷ್ಯ ಜನ್ಮ ವಿಶೇಷವಾದುದು.

ಜೀವ ರಾಶಿಗಳಲ್ಲಿ ಎಂಬತ್ತು ನಾಲ್ಕು ಲಕ್ಷ ಯೋನಿ ಭೇದಗಳಿವೆ ಎಂದು ಹೇಳುವರು. ಇವುಗಳಲ್ಲಿ ಇತರ ಜೀವಿಗಳನ್ನು ಕಳೆದು ಮನುಷ್ಯನಾಗಿ ಹುಟ್ಟುವುದು ಪುಣ್ಯಕರವಾದದು. "ಮನುಷ್ಯನಾಗಿ ಹುಟ್ಟುವುದು ಸಮುದ್ರವನ್ನು ಎರಡು ಕೈಗಳಿಂದ ಈಜಿದಾಟುವುದಕ್ಕಿಂತ ಕಠಿನ ಕಾರ್ಯ" ಎಂದು ಅರುಳ್ ನಂದಿ ಶಿವಾಚಾರ್ಯರ್ ಎಂಬ ಶೈವ ಹಿರಿಯರು ಶಿವಜ್ಞಾನ ಸಿದ್ಧಿಯಾರ್ ಎಂಬ ತಮಿಳು ಗ್ರಂಥದಲ್ಲಿ ಹೇಳಿದ್ದಾರೆ. ಔವ್ವೈಯಾರ್ ಎಂಬವರೂ "ಮನುಷ್ಯನಾಗಿ ಹುಟ್ಟುವುದು ಅಸಾಧ್ಯವಾದುದು" ಎಂದು ಹೇಳಿದ್ದಾರೆ. ನಾವು ಕಲ್ಲಾಗಿ, ಗಿಡವಾಗಿ, ಮರವಾಗಿ, ಹುಳುವಾಗಿ, ಹಕ್ಕಿಗಳಾಗಿ, ಹಾವಾಗಿ ಹುಟ್ಟಿ ಆ ಮೇಲೆ ಪುಣ್ಯವಿದ್ದರೆ ಮನುಷ್ಯರಾಗಿ ಹುಟ್ಟುವೆವು ಎಂದು ಮಾಣಿಕ್ಯವಾಚಕರು ಶಿವ ಪುರಾಣದಲ್ಲಿ ಹೇಳಿದ್ದಾರೆ. ಮನುಷ್ಯರಾಗಿ ಹುಟ್ಟುವುದು ತುಂಬಾ ಕಷ್ಟ ಎಂಬುದನ್ನು ತಿಳಿದು ನಾವು ಮಾಡಬೇಕಾದ ಕರ್ತವ್ಯಗಳನ್ನು ಕುರಿತು ಈಗ ನೋಡೋಣ.

## 2. ಮನುಷ್ಯ ಜನ್ಮ ಅನಿತ್ಯ :

ಮೊದಲನೆಯದಾಗಿ ನಮ್ಮ ಬಾಳಿನ ಅನಿತ್ಯವನ್ನು ತಿಳಿದು ಒಳ್ಳೆ ಕಾರ್ಯ ಮಾಡಬೇಕು. "ಕೆಲವರು ತಾಯಿಯ ಗರ್ಭದಲ್ಲಿಯೇ ಸತ್ತು ಹೋಗುವರು; ಕೆಲವರು ಕೆಲವುದಿನಗಳು ಭೂಮಿಯಲ್ಲಿ ಬಾಳಿದಮೇಲೆ ಸತ್ತು ಹೋಗುವರು; ಕೆಲವರು ಬಾಲಕನಾಗಿರುವಾಗಲೇ ಸತ್ತು ಹೋಗುವರು; ಕೆಲವರು ತರುಣರಾದ ಮೇಲೆ ಸತ್ತು ಹೋಗುವರು; ಕೆಲವರು ನರೆಕಂಡು ಮುಪ್ಪಿನಲ್ಲಿ ಸತ್ತು ಹೋಗುವರು. ಮನುಷ್ಯನು ಯಾವಪ್ರಾಯದಲ್ಲಿ ಸಾಯುವನು ಎಂಬುದು ಯಾರು ನಿಶ್ಚಯವಾಗಿ ಹೇಳಲಾರರು. ಆದ ಕಾರಣ ಉಸಿರು ಒಡಲಿನಲ್ಲಿ ಇರುವಾಗಲೇ ಭವ ಎಂಬ ರೋಗದಿಂದ ತೇರ್ಗಡೆಯಾಗುವ ಮಾರ್ಗವನ್ನು ತಲುಪಬೇಕು" ಎಂದು ಅರುಳ್‌ನಂದಿ ಶಿವಾಚಾರ್ಯರು ಶಿವಜ್ಞಾನ ಸಿದ್ಧಿಯಾರಿನಲ್ಲಿ ವಿವರಿಸಿದ್ದಾರೆ. "ಇಂದು ಬಾಳುವವರು ನಾಳೆ ಸಾಯುವವರು" ಎಂದು ಅಪ್ಪರ್ ಎಂಬ ಶೈವ ಸಮಯಾಚಾರ್ಯರು ಹೇಳಿದ್ದಾರೆ. ನಾವು ತೀರಿಕೊಳ್ಳುವ ಮುಂಚೆ ಶಿವನನ್ನು ಪೂಜಿಸಬೇಕು ಎಂಬುದನ್ನು ಪಟ್ಟಿನತ್ತಾರ್ ಎಂಬ ಹಿರಿಯರು "ಕಾಲನ್ ವರುಮುನ್ನೇ ಕಣ್ ಪಂಜ್ಜೈ ಮುನ್ನೇ" ಎಂದು ಪ್ರಾರಂಭಿಸುವ ಪದ್ಯದಲ್ಲಿ ಬೋಧಿಸಿದ್ದಾರೆ. ಇದೇ ನೀತಿಯನ್ನು ಕೆಳಗೆ ಕಾಣುವ ವಚನದಲ್ಲಿ ಬಸವಣ್ಣನವರೂ ನಮಗೆ ಬೋಧಿಸಿದ್ದಾರೆ.

"ನೆರೆ ಕೆನ್ನೆಗೆ, ತೆರೆಗಲ್ಲಕೆ
ಶರೀರ ಗೂಡುಹೋಗದ ಮುನ್ನ;
ಹಲ್ಲು ಹೋಗ, ಬೆನ್ನು ಬಾಗಿ
ಅನ್ಯರಿಗೆ ಹಂಗಾಗದ ಮುನ್ನ;
ಕಾಲಮೇಲೆ ಕೈಯನೂರಿ
ಕೋಲ ಹಿಡಿಯದಮುನ್ನ;
ಮುಪ್ಪಿಂದೊಪ್ಪವಳಿಯದ ಮುನ್ನ;
ಮೃತ್ಯು ಮುಟ್ಟದ ಮುನ್ನ
ಪೂಜಿಸು ಕೂಡಲಸಂಗಮ ದೇವನ."

## 3. ಮನುಷ್ಯ ಜನ್ಮ ವ್ಯರ್ಥವಾಗಬಾರದು

ಮನುಷ್ಯ ಬಾಳಿನ ಅನಿತ್ಯವನ್ನು ತಿಳಿದ ನಾವು ಶಿವನನ್ನು ಪೂಜಿಸುವುದಿಲ್ಲವಾದರೆ ಏನಾಗುವುದು ಎಂಬುದನ್ನು ಕುರಿತು ಹಿರಿಯರು ನಮಗೆ ಎಚ್ಚರಿಗೆ ಕೊಟ್ಟಿದ್ದಾರೆ. ಅಪ್ಪರ್ ಎಂಬ ನಾಮದಿಂದ ಪ್ರಸಿದ್ಧರಾಗಿರುವ ತಿರುನಾವುಕ್ಕರಸರು "ಹೂಗಳಿಂದ ಹರನನ್ನು ಪೂಜಿಸಬೇಕು, ನಾಲಗೆಯಿಂದ ಹರನ ನಾಮಗಳನ್ನು ಹೇಳಬೇಕು, ಇವುಗಳನ್ನು ಮಾಡದವರು ಶರೀರಕ್ಕೋಸ್ಕರವೇ ದುಡಿಯುವರು; ಕೊನೆ ಕಾಲದಲ್ಲಿ ಪ್ರಯೋಜನ ಇಲ್ಲದೆ ಕಾಗೆಗಳಿಗೆ ಆಹಾರವಾಗಿ ಅಳಿಯುವರು" ಎಂದೂ, "ಪುನಃ ಹುಟ್ಟುವುದಕ್ಕೆಂದೆ ಅವರು ಸಾಯುವರು" ಎಂದೂ ನಮಗೆ ಬುದ್ಧಿ ಮಾತುಗಳನ್ನು ಕೊಟ್ಟಿದ್ದಾರೆ. ಆದಿ ಶಂಕರಾಚಾರ್ಯರು ಹೇಳಿರುವಂತೆ ನಾವು "ಪುನರಪಿ ಜನನಮ್, ಪುನರಪಿ ಮರಣಮ್, ಪುನರಪಿ ಜನನೀ ಜಠರೇ ಶಯನಮ್" ಎಂಬ ಸ್ಥಿತಿಗೆ ಒಳಗಾಗುವೆವು. ಈ ಜನ್ಮದಲ್ಲಿ ಒಳ್ಳೆಯ ಸ್ಥಿತಿ ನಮಗೆ ಸಿಗದಿದ್ದರೆ, ಯಾವ ಜನ್ಮದಲ್ಲಿ ನಮಗೆ ದೇವನ ಪೂಜಿಸುವ ಸಂದರ್ಭ ದೊರೆಯುವುದೋ? ಶಿವನನು ನೆನೆಯದೇ ಬಾಳುವವರನ್ನು "ಹುಚ್ಚರು ಪ್ರಯೋಜನವಿಲ್ಲದೆ ಜೀವಿಸಿರುವವರು" ಎಂದು ಅರುಳ್ ನಂದಿ ಶಿವಾಚಾರ್ಯರು ಕೋಪಗೊಂಡು ಹೇಳಿದ್ದಾರೆ.

## 4. ಮನುಷ್ಯನ ಕರ್ತವ್ಯಗಳು

ಮನುಷ್ಯರಾಗಿ ಹುಟ್ಟಿರುವ ನಮಗೆ ಶಿವನನ್ನು ಪೂಜಿಸುವುದಕ್ಕೆ ಪೂರ್ವ ಜನ್ಮ ಪುಣ್ಯಬೇಕು, "ತಿರುವಲಇಸುಟಿ ಎಂಬ ಸ್ಥಳದಲ್ಲಿರುವ ಶಿವನನ್ನು ಪೂಜಿಸುವುದಕ್ಕೆ ಎಷ್ಟು ಪುಣ್ಯಮಾಡಿದ್ದೇನೆ" ಎಂದು ತಿರುಜ್ಞಾನ ಸಂಬಂಧರ್, "ಎನ್ನ ಪುಣ್ಣಿಯಮ್ ಸೆಯ್‌ದನ್ನೆ ನೆಜ್ಚಮೆ" ಎಂದು ಪ್ರಾರಂಭಿಸುವ ತೇವಾರದಲ್ಲಿ ಹಾಡಿದ್ದಾರೆ. ಮಾಣಿಕ್ಯವಾಚಕರು "ಶಿವನ ಕೃಪೆಯಿಂದಲೇ ಅವನನ್ನು ಪೂಜಿಸಬೇಕು" ಎಂದಿದ್ದಾರೆ. ಅರುಳ್‌ನಂದಿ ಶಿವಾಚಾರ್ಯರು "ಮನುಷ್ಯರಾಗಿ ಹುಟ್ಟುವುದೇ, ಶಿವನನ್ನು ತ್ರಿಕರಣಗಳಿಂದ ಪೂಜಿಸುವುದಕ್ಕೆ" ಎಂದು ಹೇಳಿದ್ದಾರೆ.

ತಿರುನಾವುಕ್ಕರಸರು ಶ್ರೀ ನಟರಾಜರಲ್ಲಿ ಬೇಡಿದ್ದಾರೆ. "ನಾನು ನಿನ್ನ ನೃತ್ಯವನ್ನು ಯಾವಾಗಲೂ ನೋಡಲಿಕ್ಕೆ ಆಸೆಪಡುತ್ತೇನೆ. ಮನುಷ್ಯ ಜನ್ಮದಿಂದಲೇ ಇದು ಸಾಧ್ಯವಾಗುವುದು; ಆದ್ದರಿಂದ ಮನುಷ್ಯ ಜನ್ಮವನ್ನೇ ನನಗೆ ಕೊಡಬೇಕೆಂದು ಬೇಡುತ್ತೇನೆ". ಕಾರೈಕ್ಕಾಲ್ ಅಮ್ಮೈಯಾರ್ ಎಂಬವರು "ನಾನು ಮೋಕ್ಷ ಒಂದೇ ಬೇಡುವವಳಲ್ಲ; ಮನುಷ್ಯ ಜನ್ಮ ಎತ್ತಿದರೂ ನಿನ್ನನ್ನು ಮಾಣದೆ ನೆನೆಯಬೇಕು" ಎಂದು ಶಿವನನ್ನು ಬೇಡಿದ್ದಾರೆ. ಶೇಕ್ಕಿಳಾರ್ ಪೆರಿಯಪುರಾಣದಲ್ಲಿ "ಶರಣರು ಮೋಕ್ಷವನ್ನು ಬೇಡುವುದಿಲ್ಲ; ಶಿವನನ್ನು ಪೂಜಿಸುವುದಕ್ಕಾಗಿ ಮನುಷ್ಯ ಜನ್ಮವನ್ನೇ ಬೇಡುವರು" ಎಂದು ಶರಣರ ಹಿರಿಮೆಯನ್ನೂ, ಮನುಷ್ಯ ಜನ್ಮದ ಹಿರಿಮೆಯನ್ನೂ ನಮಗೆ ಸ್ಪಷ್ಟವಾಗಿ ವಿವರಿಸಿದ್ದಾರೆ. ಪುರಂದರದಾಸರೂ "ಮಾನವ ಜನ್ಮ ದೊಡ್ಡದು" ಎಂದು ಹಾಡಿದ್ದಾರಲ್ಲ?

ಇಷ್ಟು ಹಿರಿಮೆಯನ್ನು ತೆಗೆದುಕೊಂಡಿರುವ ಮನುಷ್ಯನು ಮಾಡಬೇಕಾದ ಕರ್ತವ್ಯಗಳು ಹಲವು ಇವೆ. ಮೊದಲನೆಯದಾಗಿ ಶಿವನನ್ನು ಪೂಜಿಸಬೇಕು ಎಂಬುದನ್ನು ನೋಡಿದೆವು; ಎರಡನೆಯದಾಗಿ ಶರಣರನ್ನು ಊಟಮಾಡಿಸ ಬೇಕು. ಸಕಲ ಪ್ರಾಣಿಗಳಿಗೂ ಕರುಣೆ ತೋರಬೇಕು. ಶಾಂತನಾಗಿರಬೇಕು; ಇಂದ್ರಿಯಂಗಳಿಂದ ಪಾಪಗಳನ್ನು ಮಾಡಬಾರದು. ಇವುಗಳನ್ನು ಒಂದೆ ವಚನದಲ್ಲಿ ಬಸವೇಶ್ವರರು ಬೋಧಿಸಿದ್ದಾರೆ.

"ಭಕ್ತನು ಶಾಂತನಾಗಿರ ಬೇಕು;
ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯನಾಗಿರಬೇಕು
ಭೂತಹಿತವಹ ವಚನವ ನುಡಿಯ ಬೇಕು
ಲಿಂಗ- ಜಂಗಮದಲ್ಲಿ ನಿಂದೆಯಿಲ್ಲದಿರ ಬೇಕು.
ಸಕಲ ಪ್ರಾಣಿಗಳು ತನ್ನಂತೆ ಭಾವಿಸ ಬೇಕು
ತನು- ಮನ- ಧನವ ಗುರು- ಲಿಂಗ- ಜಂಗಮಕ್ಕೆ
ಸವೆಸ ಬೇಕು.
ಅಪಾತ್ರದಾನವಂ ಗೆಯ್ಯದಿರ ಬೇಕು
ಸಕಲೇಂದ್ರಿಯಂಗಳೂ ತನ್ನ ವಶಗತವಾಗಿರ ಬೇಕು
ಇದೇ ಮೊದಲಲ್ಲಿ ಬೇಹ ಶೌಚ ನೋಡಾ !
ಲಿಂಗವ ಪೂಜಿಸಿ ಪ್ರಸಾದವ ಪಡೆವಡೆ
ಎನಗಿದೇ ಸಾಧನ ಕೂಡಲ ಸಂಗಮ ದೇವ."

ಬಸವೇಶ್ವರರು ಮಾಡಬಾರದ ಪಾಪಗಳನ್ನು "ಕಳಬೇಡ ಕೊಲಬೇಡ" ಎಂದು ಪ್ರಾರಂಭಿಸುವ ವಚನದಲ್ಲಿ ವಿವರಿಸಿದ್ದಾರೆ. "ತಿರುವಳ್ಳುವರರ್ ಸರಿಯಾದ ರೀತಿಯಲ್ಲಿ ಜೀವಿಸುವ ಮನುಷ್ಯನು ಸ್ವರ್ಗಲೋಕದ ದೇವರಿಗಿಂದ ದೊಡ್ಡವನು" ಎಂದು ಹೇಳಿದ್ದಾರೆ. ಹಿರಿಯರು ಬೋಧಿಸಿರುವ ನೀತಿಗಳನ್ನು ಹಿಂಬಾಲಿಸಿ ಬಾಳುವ ಮನುಷ್ಯನ ಜನ್ಮ ದೊಡ್ಡದು ಎಂಬುದಲ್ಲಿ ಸಂದೇಹವಿಲ್ಲ.

---

# ಅನುಕಂಪ

—ಈಶ್ವರ ಚಂದ್ರ

ಅನುಕಂಪ ದೊಡ್ಡಗುಣ. ಪರರ ಕಷ್ಟ ನಷ್ಟಗಳನ್ನು ಕಂಡು ನಮ್ಮ ಹೃದಯ ಮಿಡಿದರೆ ಅದು ಅನುಕಂಪ. ಇದೇ ಸಹ+ಅನುಭೂತಿ=ಸಹಾನುಭೂತಿ. ಇನ್ನೊಬ್ಬರ ನೋವಿಗಾಗಿ ಮರುಗುವುದು. ಪರರ ಕಣ್ಣೀರು ಕಂಡು ಕರಗುವುದು. ಇದು ಇಂಗ್ಲಿಷಿನಲ್ಲಿ ಸಿಂಪತಿ, ಈ ಸಿಂಪತಿ ಕೇವಲ ಮಾತಿನಲ್ಲೇ ಉಳಿದು, ಕೃತಿಯಲ್ಲಿ ಇಳಿಯದಿದ್ದಾಗ ಲಿಪ್ ಸಿಂಪತಿ. ಎಣ್ಣೆ ನೀರು ಕಾಣದ ಹುಡುಗನ ತಲೆಗೂದಲನ್ನು ನೋಡಿ ಗಾಣಗಿತ್ತಿ ಅಯ್ಯೋ ಪಾಪ ಎಂದರೆ ಏನು ಬಂತು ಭಾಗ್ಯ ? ಅದು ಮೊಸಳೆ ಕಣ್ಣೀರು.

ಅನುಕಂಪ ಕೃತಿಗಿಳಿಯಬೇಕು. ಆಗ ಅದಕ್ಕೆ ಬೆಲೆ. ವೈದ್ಯ ಕ್ಷೇತ್ರದ ಅನೇಕ ಮಹತ್ವದ ಸಂಶೋಧನೆಗಳಿಗೆ ಈ ಅನುಕಂಪವೇ ಸ್ಫೂರ್ತಿ. ರೋಗದಿಂದ ನರಳುವವರ ಕಷ್ಟ ಯಾತನೆಗಳನ್ನು ನೋಡಲಾರದೆ, ಮನಕರಗಿ ಅದನ್ನು ನಿವಾರಿಸಲು ಏನಾದರೂ ಮಾಡಬೇಕೆಂಬ ಮಹತ್ವಾಕಾಂಕ್ಷೆಯಿಂದ ಹೊರಟವರು ಕಂಡುಹಿಡಿದುದರ ಫಲವಾಗಿ ಇಂದು ಅನೇಕ ರೋಗಗಳಿಗೆ ಪರಿಹಾರ ಲಭ್ಯ.

ಅನುಕಂಪದಿಂದ ನೋಡಿದಾಗ ಎಲ್ಲ ಅಪರಾಧವೂ ಕ್ಷಮ್ಯ. ತಪ್ಪು ಮಾಡಿದ ಮನುಷ್ಯನನ್ನು ಶಿಕ್ಷಿಸುವುದಕ್ಕಿಂತ ಅವನು ತಪ್ಪು ಮಾಡಲು ಕಾರಣವೇನು ಎಂದು ಹುಡುಕಿ ಆ ಸಮಸ್ಯೆಯನ್ನು ನಿವಾರಿಸಲು ಪ್ರಯತ್ನಿಸಿದರೆ ಅದು ಉನ್ನತ ಮಾರ್ಗ. ಶೀಲಗೆಟ್ಟ ಹೆಣ್ಣನ್ನು ಮೇಲೆ ನಿಲ್ಲಿಸಿ ಕಲ್ಲು ಹೊಡೆದು ಕೊಲ್ಲಬೇಕೆಂದು ಜನ ಒತ್ತಾಯ ಮಾಡಿದಾಗ, ಒಂದೂ ತಪ್ಪು ಮಾಡದವರು ಮೊದಲ ಕಲ್ಲು ಎಸೆಯಿರೆಂದು ಏಸು ಆಜ್ಞಾಪಿಸಿದ. ಆ ಗುಂಪಿನಲ್ಲಿ ತಪ್ಪು ಮಾಡದವರೇ ಇರಲಿಲ್ಲವಾಗಿ ಎಲ್ಲ ಚೆದುರಿದರು. ಆ ಹೆಣ್ಣುಮಗಳನ್ನು ಏಸು ಸನ್ಮಾರ್ಗಕ್ಕೆ ತಂದ, ಕಾಲಿಗೆ ಹೊಲಸು ಅಂಟಿದರೆ ಕಾಲನ್ನೇ ಕತ್ತರಿಸಿ ಹಾಕಬಹುದೆ? ಹೊಲಸು ತೊಳೆದು ಶುಚಿಗೊಳಿಸಬೇಕು. ಸಮಾಜದ ಅನೇಕ ದುರಾಚಾರಗಳಿಗೂ, ಹೀನ ಸಂಪ್ರದಾಯಗಳಿಗೂ ಇದೇ ಮಾರ್ಗ. ಇದು ಅನುಕಂಪದ ಮಾರ್ಗ.

ಒಂದು ಶಾಲೆಯಲ್ಲಿ ಒಂದು ವಿಚಿತ್ರ ತರಬೇತಿ ಕ್ರಮ ರೂಢಿಯಲ್ಲಿತ್ತು. ವಾರಕ್ಕೊಂದು ದಿನ ಅಲ್ಲಿನ ವಿದ್ಯಾರ್ಥಿಗಳಿಗೆ ಒಂದು ವಿಶೇಷ ಶಿಕ್ಷಣ ಕೊಡುತ್ತಿದ್ದರು. ಒಬ್ಬನಿಗೆ ಎರಡು ಕಣ್ಣೂ ಕಾಣದಂತೆ ಬಟ್ಟೆಕಟ್ಟುವುದು. ಇನ್ನೊಬ್ಬನಿಗೆ ಎರಡೂ ಕೈಅಲ್ಲಾಡಿಸದಂತೆ ಬಟ್ಟೆಯಿಂದ ಕಟ್ಟುವುದು. ಮತ್ತೊಬ್ಬನಿಗೆ ಎರಡೂ ಕಾಲುಗಳನ್ನು ಅಲ್ಲಾಡಿಸದಂತೆ ಬಟ್ಟೆಯಿಂದ ಕಟ್ಟುವುದು. ಇವರೆಲ್ಲಾ ಒಂದು ದಿನ ಹೀಗೇ ಕಳೆಯ ಬೇಕು. ಅಂದರೆ ನಿಜವಾಗಿಯೂ ಕಣ್ಣು, ಕೈ, ಕಾಲು ಕಳೆದುಕೊಂಡು ಅಂಗವಿಕಲರಾದವರ ಬಾಳು ಎಷ್ಟು ದುರ್ಭರ ಎಂಬ ಅರಿವು ಈ ವಿದ್ಯಾರ್ಥಿಗಳಿಗೆ ಬರುತ್ತದೆ. ಇಂಥ ಅಂಗವಿಕಲರನ್ನು ಸಹಾನುಭೂತಿಯಿಂದ ನೋಡುವುದು ಅವರಿಗೆ ಅಭ್ಯಾಸವಾಗುತ್ತದೆ. ಅವರಿಗೆ ನೆರವಾಗುವ ಮನೋಭಾವ ಬೆಳೆಸಿಕೊಳ್ಳುತ್ತಾರೆ.

ಕುರುಡರಿಗೆ, ಕುಂಟರಿಗೆ ಮಕ್ಕಳ ಕೈಯಿಂದ ದಾನ ಮಾಡಿಸುವುದು ನಮ್ಮಲ್ಲಿ ರೂಢಿಯಲ್ಲಿದೆ. ದಾನ ಬುದ್ಧಿ, ಧರ್ಮಬುದ್ಧಿ ಬಾಲ್ಯದಿಂದಲೇ ಬೆಳೆಯಲಿ ಎನ್ನುವುದು ಇದರ ಉದ್ದೇಶ.

ಪ್ರಾಮಾಣಿಕವಾದ ಎಲ್ಲ ದಾನ ಧರ್ಮಗಳ ಹಿನ್ನೆಲೆಯಲ್ಲೂ ತೀವ್ರವಾದ ಮಾನವಾನುಕಂಪದ ಒರತೆ ಇದೆ. ಬ್ರೇಲ್ ಲಿಪಿ, ಶ್ರವಣ ಸಾಧನ, ಕೃತಕ ಕೈಕಾಲುಗಳು ಇಂಥ ಮಾನವಾನುಕಂಪದ ಕೊಡುಗೆಗಳು. ಅಷ್ಟೇಕೆ, ಸತ್ತನಂತರ ಕಣ್ಣನ್ನು ದಾನಮಾಡುವುದು, ಬದುಕಿದ್ದಾಗಲೇ ಮೂತ್ರಪಿಂಡ ದಾನಮಾಡುವುದು, ರಕ್ತದಾನ ಮಾಡುವುದು ಅನುಕಂಪದ ಪರಮೋಚ್ಚ ನಿದರ್ಶನಗಳು. ನಮ್ಮಿಂದ ಒಬ್ಬರಿಗೆ ಕಣ್ಣು ಬರುವಂತಿದ್ದರೆ, ಒಬ್ಬರ ಪ್ರಾಣ ಉಳಿಯುವಂತಿದ್ದರೆ ಅದಕ್ಕಿಂತ ದೊಡ್ಡ ನೆರವು ಇನ್ನಾವುದು ?

17ನೇ ಪುಟ ನೋಡಿ



## ಹತ್ತು ವರ್ಷಗಳ ಹಿಂದೆ

# ಹೀಗಿತ್ತು ಅಮೇರಿಕ

—ಪ. ರಾಮಕೃಷ್ಣಶಾಸ್ತ್ರಿ

ಇದು ಹತ್ತು ವರ್ಷಗಳ ಹಿಂದೆ ಅಮೇರಿಕ ಹೀಗಿತ್ತು ಎನ್ನುವ ಚಿತ್ರ .........

ವಿಶ್ವದ ಜನಸಂಖ್ಯೆಯ ಹದಿನೆಂಟನೆಯ ಒಂದಂಶವಾದ ಇಪ್ಪತ್ತು ಕೋಟಿ ಪ್ರಜಾ ಸಮುದಾಯವಿರುವ ಅಮೇರಿಕಾ ಸಂಯುಕ್ತ ಸಂಸ್ಥಾನ-ವಿಶ್ವದ ಸಮಗ್ರ ಭೂಕ್ಷೇತ್ರದಲ್ಲಿ ಆರನೆಯ ಒಂದಂಶವನ್ನು ಹೊಂದಿದೆ. ಸಂತಾನ ನಿರೋಧ ಹೊಂದಿರುವ ಜಗತ್ತಿನ ಹದಿನೆಂಟು ದಶಲಕ್ಷ ಮಹಿಳೆಯರಲ್ಲಿ ಅರ್ಧಾಂಶ ಅಮೇರಿಕದವರು. ಜಗತ್ತಿನ ವಿಜ್ಞಾನ, ಕಾರ್ಖಾನೆಗಳಲ್ಲೆಲ್ಲ ಮೊದಲ ಸ್ಥಾನ ಹೊಂದಿರುವ ಅಮೇರಿಕ ಯಾವುದೇ ದೇಶವು ಸ್ಮರಣೆಗೆ ತಾರದಂತಹ ಸುಖಸೌಲಭ್ಯಗಳನ್ನು, ಆಧುನಿಕ ಉಪಕರಣಗಳನ್ನು ಪ್ರಜೆಗಳಿಗೆ ಒದಗಿಸುತ್ತದೆ. ಇಪ್ಪತ್ತನೆಯ ಶತಮಾನಾಂತ್ಯದ ಕಾಲಕ್ಕೆ ಅಮೇರಿಕದ ಜನಸಂಖ್ಯೆ ಹತ್ತು ಕೋಟಿಯಷ್ಟು ಹೆಚ್ಚಾಗಲಿದೆ.

ಜಗತ್ತಿನ ಮೂರರಲ್ಲೊಂದು ಪಾಲು ಉಕ್ಕು, ಆರರಲ್ಲೊಂದು ಪಾಲು ಕಬ್ಬಿಣ ಉತ್ಪಾದಿಸುವ ಅಮೇರಿಕ ವಿಶ್ವದ ಸಮಗ್ರ ಕಚ್ಚಾ ಪದಾರ್ಥಗಳಲ್ಲಿ ಶೇ. 35ನ್ನು ತಾನೇ ಬಳಸುತ್ತದೆ. ಜಗತ್ತಿನ ಬಂಗಾರ ಉತ್ಪಾದನೆಯಲ್ಲಿ ಶೇ. 5 ಪಾಲು ಪಡೆದಿರುವ ಅಮೇರಿಕದಲ್ಲಿ ವಿಶ್ವದ ಶೇ. 29 ಪಾಲು ಚಿನ್ನವಿದೆ. ತಮ್ಮ ಕೆಲಸ ತಾವೇ ಮಾಡಿಕೊಳ್ಳಬೇಕೆಂಬ ಅಮೇರಿಕದ ಸಂಪ್ರದಾಯಕ್ಕೆ ಶೇ. ಹತ್ತು ಮಂದಿ ಭಾಗಿಯಾಗಿದ್ದಾರೆ. 44 ದಶಲಕ್ಷ ಸ್ತ್ರೀಯರು ಸ್ವತಃ ಅಂಗಿ ಬಟ್ಟೆ ಹೊಲಿಯುತ್ತಾರೆ.

ವಿಶ್ವದಲ್ಲೇ ಶ್ರೀಮಂತ ದೇಶವಾದ ಅಮೇರಿಕಕ್ಕೆ ಅಪಾರ ಆರ್ಥಿಕ ಹಾಗೂ ಸೈನಿಕ ಬಲವಿದೆ. ಹಾಲು, ಮಾಂಸ, ಬೆಣ್ಣೆ, ಗಿಣ್ಣುಗಳಲ್ಲಿ ವಿಶ್ವದ ಕಾಲುಭಾಗ ಅಮೇರಿಕದಲ್ಲಿ ಉತ್ಪನ್ನವಾಗುವುದು. ಅಮೇರಿಕದಲ್ಲಿ ಶೇ. 44 ಸ್ವಯಂಚಾಲಿತ ವಾಹನಗಳಿವೆ. ಅಮೇರಿಕನ್ನರಲ್ಲಿ ಪ್ರಜೆಗಳ ಆಯುರ್ಮಾನ 70.3 ವರ್ಷಗಳಷ್ಟಿದ್ದು ಸ್ತ್ರೀಯರಿಗೆ 74, ಪುರುಷರಿಗೆ 66.7 ವರ್ಷ ಸರಾಸರಿ ಆಯುಷ್ಯವಿದೆ. ಪ್ರಪಂಚದ ವೃತ್ತಪತ್ರಿಕೆಗಳಲ್ಲಿ ಐದನೆಯ ಒಂದು ಪಾಲು ಇಲ್ಲಿ ಪ್ರಕಟವಾಗುತ್ತದೆ.

ಜಗತ್ತಿನ ವಿದ್ಯುದುತ್ಪಾದನೆಯಲ್ಲಿ ಶೇ. ಇಪ್ಪತ್ತು ಪಾಲು ಅಮೇರಿಕದ್ದು. ಇಲ್ಲಿ ಐನೂರು ರಾಜ್ಯಗಳಿವೆ. ಹನ್ನೊಂದು ಅಣುಶಕ್ತಿ ಕೇಂದ್ರಗಳಿವೆ. ವಿಶ್ವದ 180 ದಶಲಕ್ಷ ಟೆಲಿಫೋನುಗಳಲ್ಲಿ ಶೇ. 49 ಅಮೇರಿಕದಲ್ಲಿವೆ. ಒಂದು ನೌಕರಿ ಬಿಟ್ಟು, ಇನ್ನೊಂದು ನೌಕರಿಗೆ ಸೇರಲು ಕಾಲಾವಕಾಶವಿರುವ ನಿರುದ್ಯೋಗಿ ಕೈಗಾರಿಕೋದ್ಯಮಿಗೆ ಸರಕಾರ ವಾರಕ್ಕೆ 45.22 ಡಾಲರಿನಂತೆ ಕೊಡುತ್ತದೆ. ಅಮೇರಿಕದ ಪತ್ರಿಕೆಗಳಲ್ಲಿ ರೀಡರ್ಸ್ ಡೈಜೆಸ್ಟ್ 17.6 ದಶಲಕ್ಷ, ನ್ಯೂಯಾರ್ಕ್ ಡೈಲಿನ್ಯೂಸ್ ದಿನಕ್ಕೆ 20 ಲಕ್ಷ (ರವಿವಾರ 30 ಲಕ್ಷ) ಪ್ರತಿ ಪ್ರಸಾರವಿದೆ.

ಅಮೇರಿಕದ ಅತ್ಯಂತ ಶ್ರೀಮಂತ ರಾಜ್ಯವಾದ ಅಲಾಸ್ಕಾದ ಭಾರೀ ತೈಲ ನಿಕ್ಷೇಪವಿರುವ 4,50,000 ಎಕರೆಗಳಲ್ಲಿ ಬಾವಿ ತೋಡುವ ಹಕ್ಕಿಗೆ ತೈಲ ಕಂಪನಿಗಳು ನೂರು ದಶಲಕ್ಷ ಡಾಲರು ಕೊಡುತ್ತವೆ. ಅಲಾಸ್ಕಾದ 294000 ಜನರಿಗೆ ಹಂಚಿದರೆ ಈ ನಿಕ್ಷೇಪದಿಂದ ಸರಾಸರಿ ಮೂರು ಸಹಸ್ರ ಡಾಲರಿಗೂ ಜಾಸ್ತಿ ಬರುತ್ತದೆ. ಅಮೇರಿಕದಲ್ಲಿ 40 ಸಾವಿರ ಎಲೆಕ್ಟ್ರಾನಿಕ್ ಕಂಪ್ಯೂಟರ್‌ಗಳಿವೆ. ತಯಾರಿಕೆಯ ಹಂತದಲ್ಲಿ 50 ಅಣುಶಕ್ತಿ ಕೇಂದ್ರಗಳಿವೆ.

ಬಾಹ್ಯಾಕಾಶ ಸ್ಪರ್ಧೆ ಆರಂಭವಾದಲಾಯಿತು ಅದಕ್ಕಾಗಿ ಅಮೇರಿಕ 40 ಶತಕೋಟಿ ಡಾಲರು ವ್ಯಯಿಸಿದೆ. 1968ರಲ್ಲಿ ಇದರ ಒಂದು ಸಂಶೋಧನೆಗಾಗಿ 4.4 ಶತಕೋಟಿ ಡಾಲರು ವ್ಯಯಿಸಿತು. ಅಮೇರಿಕದ ಶೇ. 70 ಮಂದಿಗೆ ಸ್ವಂತ ಮನೆಯಿದೆ. ಇಲ್ಲಿಯ ಉದ್ಯೋಗಿಗಳಲ್ಲಿ ಶೇ. 37 ಪಾಲು ಸ್ತ್ರೀಯರೇ ಆಗಿದ್ದು ಶೇ. 90 ಸ್ತ್ರೀಯರು ನೌಕರಿಗೆ ಸೇರಿದ್ದಾರೆ. ಈ ಸ್ತ್ರೀಯರಲ್ಲಿ ಶೇ.

6 ವಿಜ್ಞಾನಿಗಳು, ಶೇ. 72 ಗುಮಾಸ್ತೆಗಳು, ಶೇ. 5 ನ್ಯಾಯಾಧೀಶರು, ಶೇ. 60 ವಿದ್ಯಾರ್ಥಿಗಳು, ಶೇ. 13 ಲಾಯರುಗಳಾಗಿದ್ದಾರೆ. ಶೇ. 63 ಮಂದಿಗೆ ವರ್ಷಕ್ಕೊಮ್ಮೆ ಸಂಬಳಸಹಿತ ರಜೆಯಿದೆ. ಎಂಟನೆಯ ಪಾಲು ಅಥವಾ 25 ದಶಲಕ್ಷ ಪ್ರಜೆಗಳಿಗೆ ಖಾಸಗಿ ಷೇರುಗಳಿವೆ. ಅವರಲ್ಲಿ ನಾಲ್ಕನೆಯ ಮೂರು ಮಂದಿಗೆ ಉಳಿತಾಯದ ವಿಮೆಯ ಷೇರುಗಳಿವೆ.

ಶೇ. 80 ಮಂದಿ ಅಮೇರಿಕನ್ನರಿಗೆ ಸ್ವಂತ ಕಾರುಗಳಿವೆ. ಇಲ್ಲಿನ ಒಬ್ಬ ಕಾರ್ಮಿಕ ವರ್ಷಕ್ಕೆ 11,794 ಡಾಲರು ಕ್ರಯದ ಪದಾರ್ಥದ ಉತ್ಪನ್ನಗಾರನಾಗಿ ಶೇ 79.4 ಅಂದರೆ 9.061 ಡಾಲರು ಸಂಬಳ ಪಡೆದು ಉಳಿದುದನ್ನು ತೆರಿಗೆ ಹಾಗೂ ಇತರ ಕಾರಣಗಳಿಗೆ ಕೊಡುತ್ತಾನೆ. ಅಮೇರಿಕದಲ್ಲಿ ಸುಮಾರು 190 ದಶಲಕ್ಷ ಡಾಲರು ಇನ್‌ಕಂಟ್ಯಾಕ್ಸ್ ಬರುತ್ತದೆ. ಅಲ್ಲಿ 80 ದಶಲಕ್ಷ ಮನೆಗಳಿಗೆ ಈಜುಕೊಳಗಳಿವೆ. 5.5 ದಶಲಕ್ಷ ಸಂಚಾರಿ ಮನೆಗಳನ್ನು ಅಮೇರಿಕ ಹೊಂದಿದೆ. ಅಮೇರಿಕದಲ್ಲಿ ಮಾರಾಟಗಾರರಿಗೆ ಶೇ. 10.1 ಪಾಲು ಲಾಭಾಂಶವಿದೆ.

ಭಾರತದ ಎಲ್ಲಾ ಬ್ಯಾಂಕಿಂಗ್ ಉದ್ಯಮ ಒಟ್ಟು 4500 ಕೋಟಿ ಡಾಲರು. ಆದರೆ ಬ್ಯಾಂಕ್ ಆಫ್ ಅಮೇರಿಕವೊಂದರಲ್ಲೇ 18 ಸಾವಿರ ಕೋಟಿ ಡಾಲರು ಠೇವಣಿಯಿದೆ. ಬ್ಯಾಂಕುಗಳಲ್ಲಿ ಶೇ. 18ರವರೆಗೆ ಬಡ್ಡಿಯಿದೆ. ಅಮೇರಿಕದ ವಾರ್ಷಿಕ ಶಿಕ್ಷಣಾವೆಚ್ಚ 80 ಶತಕೋಟಿ ಡಾಲರುಗಳಿದ್ದರೆ ಅಮೇರಿಕನ್ನರು ವರ್ಷದಲ್ಲಿ ದುಂದುವೆಚ್ಚ ಮಾಡುವ ಹಣ 83 ಶತಕೋಟಿ. ಅನೇಕರ ವಾರ್ಷಿಕ ಆದಾಯದ ಶೇ. 10 ಇದಕ್ಕೇ ವ್ಯಯವಾಗುತ್ತದೆ. ಅವುಗಳಲ್ಲಿ ಕ್ರಿಸ್‌ಮಸ್ ಕಾರ್ಡ್‌ಗಳಿಗಾಗಿ ಪ್ರತಿ ಕುಟುಂಬವೂ ತಲಾ 200 ಡಾಲರು, ಸಮಗ್ರ ಗೊಂಬೆಗಳಿಗೆ, ಮಕ್ಕಳ ಆಟಿಗೆಗೆ 4 ಶತಕೋಟಿ ಡಾಲರು ಖರ್ಚಾಗುತ್ತದೆ. ನ್ಯೂಯಾರ್ಕ್ ಹಾಗೂ ಕ್ಯಾಲಿಫೋರ್ನಿಯಗಳು ಆರನೆಯ ಧನಿಕ ರಾಜ್ಯಗಳಾಗಿವೆ.

ಐನೂರಕ್ಕೂ ಮಿಕ್ಕ ಕೃತಕ ಉಪಗ್ರಹಗಳನ್ನು ಹಾರಿಸಿದ ಅಮೇರಿಕ ಇದರಲ್ಲಿ ಮೂರು ಸೈನಿಕೋದ್ದೇಶದ ಉಪಗ್ರಹಗಳನ್ನು ಹಾರಬಿಟ್ಟಿದೆ. 14 ಸಲ ಚಂದ್ರಲೋಕಕ್ಕೆ ರಾಕೆಟ್ ಹಾರಿಸಿ, ಒಂದು ಲಕ್ಷಕ್ಕೂ ಮೀರಿ ಛಾಯಾಚಿತ್ರಗಳನ್ನು ತರಿಸಿದೆ. ಮೂರು ಸಾವಿರ ತಾಸಿಗೂ ಜಾಸ್ತಿ ಕಾಲ ಬಾಹ್ಯಾಕಾಶ ಯಾತ್ರಿಕರು ಹಾರಾಡಿದ್ದಾರೆ. ಬಾಹ್ಯಾಕಾಶದ 1,253,000 ನೌಕರರಿಗೆ 9.2 ಶತಕೋಟಿ ಡಾಲರು ಸಂಬಳವಿದೆ.

ಜಪಾನ್ ಅಥವಾ ಪ. ಜರ್ಮನಿಯ $\frac{2}{3}$ ಭಾಗ ಆದಾಯ ಅಮೇರಿಕದ್ದು. ಇದರಲ್ಲಿ ಅರ್ಧಾಂಶ ಪ್ರಯಾಣಕ್ಕೆ, ಮನೋರಂಜನೆಗೆ ಖರ್ಚಾಗುತ್ತದೆ. ಅಮೇರಿಕರ ಸ್ವಯಂಚಾಲಿತ ವಾಹನಗಳಲ್ಲಿ 738 ಸಾವಿರ ನೌಕರರಿದ್ದಾರೆ. ಇಲ್ಲಿ ಒಂದು ರೆಫ್ರಿಜಿರೇಟರ್ ಕೊಳ್ಳಲು 93 ಗಂಟೆ, 23 ನಿಮಿಷ, ಒಂದು ಕಾರು ಕೊಳ್ಳಲು 186 ದಿನ, ಒಂದು ಜತೆ ಚಪ್ಪಲಿಗೆ 6 ಗಂಟೆ 53 ನಿಮಿಷ, ಒಂದು ಕಿಲೋ ಸಕ್ಕರೆಗೆ 5 ನಿಮಿಷ ದುಡಿದರೆ ಸಾಕು. ಅಮೇರಿಕದ ಶೇ. 70 ಮಂದಿ ಇಚ್ಛೆಗೆ ಮೀರಿ ಮೂನ್ನೂರು ಪಟ್ಟು ಜಾಸ್ತಿ ಆಹಾರವನ್ನು ಶೇ. 50 ಮಂದಿ ಶಕ್ತಿಮೀರಿ ಹುಟ್ಟೆಯ ಆಹಾರವನ್ನು ತಿನ್ನುತ್ತಾರೆ.

ಅಮೇರಿಕದಲ್ಲಿ ತಲಾ ಒಬ್ಬನಂತೆ ಕಾರುಗಳು 101, 048,000 ಇವೇ. 1967ರಲ್ಲಿ ಇವು ಓಡಿದ ದೂರ ತಲಾ ಒಬ್ಬನಿಗೆ 4,826 ಮೈಲಿ ಹಾಗೂ ಮುಗಿದ ಪೆಟ್ರೋಲು 400 ಗ್ಯಾಲನು. 1967 ರಲ್ಲಿ ಅಮೇರಿಕ 4 ಕೋಟಿ ಪ್ಲಾಸ್ಟಿಕ್ ಜಾಡಿ ಸೇರಿ ಶತಕೋಟಿ ಡಬ್ಬಿಗಳನ್ನು ಬಳಸಿ ವಿಸರ್ಜಿಸಿತು. 80 ಲಕ್ಷ ಮೋಟಾರುಗಳು, 80 ಲಕ್ಷ ಟಿ.ವಿ. ಸೆಟ್‌ಗಳೂ ಹಾಳಾಗಿವೆ. ಒಬ್ಬ ಪ್ರಜೆಯಿಂದ ನೂರು ವಸ್ತುಗಳು, ಸರಾಸರಿ ಪ್ರತಿ ಮೈಲಿಗೆ 770 ಕಾಗದಗಳು, 730 ಸಿಗರೇಟ್ ಪ್ಯಾಕುಗಳು, 600 ಬೀರ್ ಸೀಸೆಗಳು ಎಸೆಯಲ್ಪಡುವವು.

ದ್ವಿತೀಯ ಮಹಾಯುದ್ಧದಿಂದ ಘಾಸಿಯಾದ ಯೂರೋಪಿಗೆ ಅಮೇರಿಕ 48 ಸಾವಿರ ದಶಲಕ್ಷ ಡಾಲರು, ರಷ್ಯಕ್ಕೆ 12 ಸಾವಿರ ದಶಲಕ್ಷ ಡಾಲರುಗಳ ಸಹಾಯವಿತ್ತಿತು. 1951 ರಿಂದ 69ರವರೆಗೆ ಭಾರತ ವಿದೇಶಗಳಿಂದ ಪಡೆದ 11,134 ಕೋಟಿ ರೂ, ಸಾಲದಲ್ಲಿ ಅಮೇರಿಕದ್ದು ಸಿಂಹಪಾಲು (ಶೇ. 52.8) 700.45 ಕೋಟಿ ರೂಪಾಯಿ ಸಹಾಯ ಸಿಕ್ಕಿದೆ. ಭಾರತದಿಂದ 312 ದಶಲಕ್ಷ ಡಾಲರು ಕ್ರಯದ ವಸ್ತುಗಳನ್ನು ಆಮದು ಮಾಡಿಕೊಂಡು, 450 ಕೋಟಿ ರೂಪಾಯಿಯ ಆಹಾರ, 1958-69ರ ಅವಧಿಯಲ್ಲಿ ದೊಡ್ಡ ಯೋಜನೆಗಳಿಗಾಗಿ 612 ಕೋಟಿ ರೂಪಾಯಿ, ಆಮದು ರಫ್ತು ಬ್ಯಾಂಕಿನಿಂದ 365·7 ಕೋಟಿ ರೂಪಾಯಿ ಸಾಲವಿತ್ತಿದೆ. 1969ರಲ್ಲಿ ವಿಶ್ವಸಂಸ್ಥೆಗೆ 64.5 ಕೋಟಿ ಡಾಲರಿನಂತೆ, 1972ರಲ್ಲಿ 25 ಕೋಟಿ ಡಾಲರಿನಂತೆ ಇತರೆಲ್ಲಾ ಸದಸ್ಯ ರಾಷ್ಟ್ರಗಳಿಗಿಂತ ಹೆಚ್ಚಾಗಿ ವಿಶ್ವಸಂಸ್ಥೆಯ ಅಭಿವೃದ್ಧಿಗಾಗಿ 585 ಕೋಟಿ ರೂ. ಸಹಾಯವಿತ್ತಿದೆ.

ಅಮೇರಿಕದಲ್ಲಿ ರೇಡಿಯೋ ಲೈಸೆನ್ಸಿಲ್ಲ, ಪತ್ರಿಕೋದ್ಯಮ ಆರಂಭಿಸಲು ಸರಕಾರದ ಒಪ್ಪಿಗೆ ಬೇಕಿಲ್ಲ. ಇಲ್ಲಿ 555 ಕಲಾಶಾಲೆಗಳಿವೆ. ಅಮೇರಿಕನ್ ಪ್ರಜೆ ತಲಾ ಐದರಂತೆ ಸಾವಿರ ಮಿಲಿಯ ಪುಸ್ತಕ ಕೊಳ್ಳುತ್ತಾನೆ. ಪ್ರತಿ ಮನೆಗೂ ರೆಫ್ರಿಜಿರೇಟರ್ ಇದೆ. ಶೇಕಡ 96 ಕುಟುಂಬಕ್ಕೆ ಟೆಲಿವಿಜನ್ ಇದೆ. ಪ್ರತಿ ನಾಲ್ಕು ಕುಟುಂಬಗಳಲ್ಲಿ ಒಂದು ಹತ್ತು ವರ್ಷಕ್ಕೊಮ್ಮೆ ಹೊಸ ಮನೆ ಹೊಂದುತ್ತದೆ. ಇಲ್ಲಿ 76 ಸಾವಿರ ಲೈಬ್ರರಿಗಳು ದಿನವಿಡೀ ತೆರೆದಿರುತ್ತವೆ. ಸಾವಿರ ವಸ್ತು ಸಂಗ್ರಹಾಲಯಗಳು, 97 ಸಾವಿರ ಪ್ರಾಥಮಿಕ ಶಾಲೆಗಳು, 31 ಸಾವಿರ ಮಾಧ್ಯಮಿಕ ಶಾಲೆಗಳಿವೆ.

ಶೇ. 60 ಕಾಲೇಜ್ ವಿದ್ಯಾರ್ಥಿಗಳಿಗೆ ಉಪವೃತ್ತಿಯಿದೆ. ಶೇ. ಐದೂವರೆ ಮಂದಿ ಬೇಸಾಯಗಾರರು. ಹೆಂಗಸು-ಗಂಡಸಿಗೆ ಸರಿಸಮಾನ ಸಂಬಳವಿದೆ. ವಿಶ್ವದ ಮೂರನೇ ಎರಡು ಪಾಲು ಕಾರುಗಳೆಂದರೆ 9,30,00,000 ಕಾರುಗಳು ಅಲ್ಲಿವೆ. ಒಬ್ಬ ವಿದ್ಯಾರ್ಥಿಗೆ 3500 ರೂಪಾಯಿ, ಸಾರ್ವಜನಿಕ ಶಿಕ್ಷಣಕ್ಕೆ 25 ಸಾವಿರ ಕೋಟಿ ರೂಪಾಯಿ ಸರ್ಕಾರ ವ್ಯಯಿಸುತ್ತದೆ.

ಮೂನ್ನೂರು ವರ್ಷಗಳಿಂದ ನಲ್ಲಿ ಸೌಲಭ್ಯ ಅಲ್ಲಿದೆ. ಅಲ್ಲಿಯ ಹಾರ್ವರ್ಡ್ ಗ್ರಂಥಾಲಯದಲ್ಲಿ 70 ಲಕ್ಷ ಪುಸ್ತಕಗಳಿವೆ.

ಒಬ್ಬ ಸಾಧಾರಣ ಕೆಲಸಗಾರನ ಒಂದು ಗಂಟೆಯ ಸಂಬಳದಿಂದ 11 ಪೌಂಡು ಬ್ರೆಡ್ ಬರುತ್ತದೆ. ದಿನಕ್ಕೆ 8 ತಾಸಿನಂತೆ ವಾರಕ್ಕೆ 40 ತಾಸು ದುಡಿತ, ಶನಿವಾರ ರವಿವಾರ ರಜೆಯಿದೆ. ಅಮೇರಿಕದಲ್ಲಿ ಸುಪ್ರಿಂ ಕೋರ್ಟ್ ಜಡ್ಜರಿಗೆ ಜೀವನವಿಡೀ ಅಧಿಕಾರವಿದೆ.

ಅಮೇರಿಕದಲ್ಲಿ ಡೆಮೋಕ್ರೆಟಿಕ್ ಮತ್ತು ರಿಪಬ್ಲಿಕನ್ ಎಂಬ ಎರಡೇ ಪಕ್ಷಗಳಿವೆ. ಪ್ರತಿ ರಾಜ್ಯಕ್ಕೆ ಇಬ್ಬರಂತೆ ಸಾವಿರ ಸದಸ್ಯರಿದ್ದಾರೆ. ಅವರ ಕಾರ್ಯಾವಧಿ ಆರು ವರ್ಷ 437 ಪ್ರತಿನಿಧಿ ಸಭಾ ಸದಸ್ಯರ ಕಾರ್ಯಾವಧಿ ಎರಡು ವರ್ಷ.

---

14ನೇ ಪುಟದಿಂದ 'ಅನುಕಂಪ'

ಅನುಕಂಪ, ಬರೆಹಗಾರನಿಗಿರಬೇಕಾದ ಪ್ರಾಥಮಿಕ ಗುಣ. ಮಹಾಕಾವ್ಯ, ಮೇರು ಕೃತಿಗಳನ್ನು ರಚಿಸಿದ ಸಾಹಿತ್ಯಗಳಲ್ಲಿ ಮಿಡಿಯುವುದು, ಈ ಸಹಾನುಭೂತಿ. ಕ್ರೌಂಚ ಮಿಥುನದ ದುರಂತ ಮಿಡಿಸಿದ ಅನುಕಂಪ ವಾಲ್ಮೀಕಿಯಿಂದ ರಾಮಾಯಣ ಸೃಷ್ಟಿಗೇ ನಾಂದಿಯಾಯಿತು. ಇನ್ನೊಬ್ಬರ ನೋವನ್ನು ಅರ್ಥ ಮಾಡಿಕೊಂಡು ಚಿತ್ರಿಸಿದಾಗ ಅದಕ್ಕೆ ಬೆಲೆ ಅಂಥ ಕೃತಿ ದಲಿತರ ನೋವನ್ನು ಅಳಿಸಲೂ ನೆರವಾಗಬಹುದು. ಫ್ರಾನ್ಸಿನಲ್ಲಿ ಕಲ್ಲಿದ್ದಲು ಗಣಿಯಲ್ಲಿ ಕೆಲಸ ಮಾಡುತ್ತಿದ್ದ ಎಳೆಯ ಮಕ್ಕಳು ಕಷ್ಟ ನಿವಾರಣೆಯಾದದ್ದು ಲೇಖನಿಯ ಅನುಕಂಪದಿಂದಲೇ. ಶೋಷಿತರ ವಿಷಯದಲ್ಲಿ ಹುಟ್ಟುವ ಅನುಕಂಪ, ಶೋಷಕರ ಮೇಲೆ ಆಕ್ರೋಶವಾಗಿಯೂ ಎರಗಬಹುದು. ಇದು ಕ್ರಿಯಾಶಾಲಿ ಅನುಕಂಪ. ಅಶಕ್ತರು, ಅಂಗವಿಕಲರು ಶೋಷಿತರು, ಅಬಲೆಯರು- ಎಲ್ಲರೂ ಅನುಕಂಪಕ್ಕೆ ಅರ್ಹರೇ. ಅಸ್ಪೃಶ್ಯರನ್ನು ಗಾಂಧೀಜಿಯವರು ಅನುಕಂಪದಿಂದ ನೋಡಿದ್ದರ ಫಲ ಹರಿಜನೋದ್ಧಾರ.

ಅನುಕಂಪ ಕೇವಲ ನೆಂಟರಿಷ್ಟರಿಗೆ, ಸ್ನೇಹವರ್ಗಕ್ಕೆ ಮೀಸಲಾದರೆ ಸಾಲದು. ಅದು ಅಪರಿಚಿತರಿಗೂ ವಿಸ್ತರಗೊಳ್ಳಬೇಕು. ನೆರೆಯ ರಾಜ್ಯದಲ್ಲಿ ಪ್ರವಾಹದಿಂದ ಲಕ್ಷಾಂತರ ಜನ ನಿರ್ವಸಿತರಾದರೆ ಅವರಿಗೆ ನಮ್ಮ ಸಹಾಯ ಬೇಕು. ನೆರೆಯ ರಾಷ್ಟ್ರದಲ್ಲಿ ಯುದ್ಧದಿಂದ ಜನ ಕಂಗೆಟ್ಟರೆ ಅವರಿಗೆ ಅನುಕಂಪಿತ ನೆರವುಬೇಕು.

ಮನುಷ್ಯ ಮನುಷ್ಯನಿಗೆ ಅನುಕಂಪ ತೋರಿದರೆ ಸಾಕೆ? ಮೂಕ ಪ್ರಾಣಿಗಳೂ ಅನುಕಂಪಕ್ಕೆ ಅರ್ಹ. ಅವಕ್ಕೆ ಹಸಿವಾದಾಗ ಹುಲ್ಲು ನೀರು, ರೋಗ ಬಂದಾಗ ಚಿಕಿತ್ಸೆ ಒದಗಿಸುವುದು ಅಗತ್ಯ. ನಮ್ಮ ನೆರೆಹೊರೆಯಲ್ಲಿ ಸ್ವಚ್ಛಂದವಾದ ಹಾರಾಡುವ ಹಕ್ಕಿ ಪಕ್ಷಿಗಳ ವಿಷಯದಲ್ಲೂ ಕರುಣೆ ಇರಲಿ, ಕಾಡುಪ್ರಾಣಿಗಳ ವಿಷಯದಲ್ಲೂ ಕಾಠಿಣ್ಯ ಬೇಡ.

ವಿವೇಚನೆಯೊಡನೆ ವಿನಿಯೋಗವಾಗುವ ಅನುಕಂಪ ಸರ್ವ ಹಿತಕಾರಿ.—

# ಮೂಡಿಬಂದ ಸಂಕ್ರಾಂತಿ

"ಎಳ್ಳುಬೆಲ್ಲ ತಿಂದು ಒಂದೆರಡು ಒಳ್ಳೆ ಮಾತಾಡೋಣ''

—ವಿಶಾಲಾಕ್ಷಿ ದಕ್ಷಿಣಾಮೂರ್ತಿ

ಬಾಗಿಲಿನ ಮೇಲೆ ಮೆಲ್ಲನೆ ಟಕ್ ಟಕ್ ಬಡಿತ. ಕಾಲಿಂಗ್ ಬೆಲ್ಲಿನ ಒತ್ತಾಟ. ಟ್ರಿಂಗ್ ಟ್ರಿಂಗ್.

ಒಳಗೆ ಮನೆಗೆಲಸದಲ್ಲಿ ತೊಡಗಿದ್ದ ಅಪರ್ಣಳಿಗೆ ಬೇಗ ಕೇಳಿಸಲಿಲ್ಲ. ಮತ್ತೊಮ್ಮೆ ಅಂಥದೇ ಸದ್ದು.

ಆರಾಮ ಕುರ್ಚಿಯಲ್ಲಿ ಕುಳಿತು ವಿಶ್ರಮಿಸಿಕೊಳ್ಳುತ್ತಿದ್ದ ಶ್ರೀಧರನಿಗೆ ಇನ್ನು ಹೆಚ್ಚುಹೊತ್ತು ಅದೇ ಸ್ಥಿತಿಯಲ್ಲಿ ಕುಳಿತಿರಲಾಗಲಿಲ್ಲ. ಅವನು ತಾಳ್ಮೆಗೆಟ್ಟವನಂತೆ ಹೆಂಡತಿಯನ್ನು ಕೂಗಿದ.

"ಅಪರ್ಣಾ, ಯಾರೋ ಹೊರಗೆ ಬಂದಿರೋ ಹಾಗಿದೆ. ಕೇಳಿಸಲಿಲ್ವೆ ?"

"ಅಂ, ಬಂದೇಂದ್ರೆ" ಒದ್ದೆಯಾದ ಕೈಗಳನ್ನು ಟವೆಲ್ಲಿಗೆ ತಿಕ್ಕಿಕೊಳ್ಳುತ್ತ ಹೊರನಡೆದು ಬಂದು ಬಾಗಿಲು ತೆರೆದಳು.

ಆ ದೃಶ್ಯ ಅವಳನ್ನು ಅಚ್ಚರಿಗೊಳಿಸಿತ್ತು.

"ಓ ! ಲಲಿತ, ಬಾ ಒಳಗೆ ! ಬನ್ನಿ ಒಳಗೆ !"

ಲಲಿತಾ ತನ್ನ ಗಂಡನೊಂದಿಗೆ ಎಳೆಮಗು ಮೋಹನನನ್ನು ಎತ್ತಿಕೊಂಡು ಒಳಗೆ ಬಂದಳು.

ಅಪರ್ಣಾ ಒಳಗೆ ಬಂದು ಗಂಡನ ಮುಂದೆ ಏನೋ ಹೇಳಿದಾಗ, ಅವನೂ ಹೊರಗೆ ಬಂದು ಆತ್ಮೀಯತೆಯಿಂದ ಬಂದ ಅತಿಥಿಗಳನ್ನು ಸ್ವಾಗತಿಸಿದ.

ಅಪರ್ಣಳ ಬೆನ್ನ ಹಿಂದೆ ನಡೆದು ಬಂದ ಲಲಿತ,

"ಅಬ್ಬಾ ! ಏನು ಸೆ ಖೆ ಯ ಮ್ಮ! ಈ ಬಿಸಿಲಿನ ಝಳಕ್ಕೂ ಈ ಮಗುವಿನ ಕಿರಿ ಕಿರಿಗೂ ಸಾಕಾಗಿ ಹೋಗಿದೆ ನಂಗೆ. ಏನೇ ಕಷ್ಟವಾದರೂ ಸರಿ ಸಂಕ್ರಾಂತಿಯ ಎಳ್ಳು, ಬೆಲ್ಲ ನಿಂಗೆ ಹಂಚಿಯೇ ಹೋ ಗ ಬೇ ಕ ೦ ತ ಬಂದೆ. ನೀನು ನನ್ನ ಬಾಲ್ಯಗೆಳತಿ. ನಮ್ಮಿಬ್ಬರ ಸ್ನೇಹ ಋಣ ಇನ್ನಷ್ಟು ಬೆಸೆಯಲಿ ಅಂತ ನನ್ನಾಸೆ."

"ನಿಂತೇ ಇದ್ದೀಯಲ್ಲ ! ಕೂತುಕೋ ಲಲಿತಾ, ಈಗ ಕಾಫಿ ಮಾಡಿಕೊಂಡು ಬಂದುಬಿಡ್ತೀನಿ."

ಅಲ್ಲಿದ್ದ ಸೋಫದತ್ತ ಕೈತೋರಿಸಿ ಗೆಳತಿಯನ್ನು ಕುಳ್ಳಿರಿಸಿ ಅಪರ್ಣಾ ಅಡಿಗೆಯ ಮನೆಗೆ ಹೊರಟಳು.

"ಅಪರ್ಣಾ, ಏನೂ ಮಾಡಬೇಡ ಕಣೆ. ಈಗ ತಾನೆ ಭಾರವಾದ ಊಟ ಮಾಡಿಕೊಂಡೇ ಬಂದಿದ್ದೀವಿ.''

''ನೀವು ಊಟ ಮಾಡಿ ಬಂದಿಲ್ಲ ಅಂತ ನಾನೆಲ್ಲಿ ಹೇಳಿದೆ? ಬಾಲ್ಯದ ಗೆಳತಿ ಅಪರೂಪವಾಗಿ ನಮ್ಮ ಮನೆಗೆ ಬಂದರೆ ಸ್ವಲ್ಪವಾದರೂ ಆತಿಥ್ಯ ಮಾಡಬೇಡವೆ ? ಈಗ ನೀನು ನಮ್ಮ ಅತಿಥಿ ಆ ಘೋಷಣೆ ಮಾಡೋದು ಸಲ್ಲದು."

ಲಲಿತಾ ಅಳುತ್ತಿರುವ ಮಗು ಮೋಹನನನ್ನು ಸುಧಾರಿಸುತ್ತಿದ್ದಳು. ಫ್ಯಾನಿನ ಗುಂಡಿ ಒತ್ತಿದೊಡತೆಯೇ ತಂಗಾಳಿ ಮೆಲ್ಲಗೆ ಬೀಸಲಾರಂಭಿಸಿತು.

ಮೋಹನ, ತಾಯಿ ಫೀಡಿಂಗ್ ಬಾಟಲಿನಲ್ಲಿ ತುಂಬಿ ಕೊಟ್ಟ ಹಾಲನ್ನು ಹೀರಿ ಬೀಸುಗಾಳಿಗೆ ಮೈಯೊಡ್ಡಿ ತನ್ನ ದಣಿವನ್ನು ಆರಿಸಿಕೊಂಡು ಅಳುವನ್ನು ನಿಲ್ಲಿಸಿದ್ದ.

ಅಪರ್ಣಾ ಸಿಹಿ, ಖಾರ ತಿಂಡಿಗಳಿಂದ ತುಂಬಿದ ತಟ್ಟೆಗಳನ್ನು ತಂದು ಗೆಳತಿಯ ಮುಂದಿಟ್ಟಳು. ಹೊರಗಿನ ಕೋಣೆಯಲ್ಲಿ ಕುಳಿತು ಶ್ರೀಧರನೊಂದಿಗೆ ಮಾತಿಗಾರಂಭಿಸಿದ್ದ ಅಶೋಕ.

ತಿಂಡಿತಟ್ಟೆ ಹಿಡಿದುಬಂದ ಹೆಂಡತಿಯನ್ನು ಕಂಡು ನಗುತ್ತಾ ಪರಿಚಯ ಮಾಡಿಕೊಟ್ಟ ಶ್ರೀಧರ.

"ನೋಡಿ, ಮಿ|| ಅಶೋಕ, ಇವಳೇ ನನ್ನ ಧರ್ಮಪತ್ನಿ ಅಪರ್ಣಾ."

ಕೈಜೋಡಿಸಿ 'ನಮಸ್ಕಾರ' ಎಂದಳು ಅಪರ್ಣಾ.

ಅಶೋಕ ಕೂಡ ಪ್ರತಿನಮಸ್ಕಾರ ಹೇಳಿದ.

ಏನಾದರೂ ಮಾತಾಡಲು ವಿಷಯ ಬೇಕಾಗಿತ್ತು ಅವನಿಗೆ. ಅದರಂತೆಯೇ ಲೋಕಾಭಿರಾಮವಾಗಿ ಮಾತು ಮೊದಲಿಟ್ಟ,

20ನೇ ಪುಟ ನೋಡಿ



## ಬಾಳುವೆ

—ಎಸ್. ಕೃಷ್ಣಪ್ಪ

ದೇಹವು ಬಂದಿದೆ
ಭೂಮಿಯ ಮೇಲೆ
ಅದರೊಳಗೊಂದಿದೆ
ಜೀವವು ಬೇರೆ ||೧||

ಹಣವೂ ಬೇಕು
ಹೆಣ್ಣೂ ಬೇಕು
ಮಣ್ಣೂ ಬೇಕು
ದೇಹದ ಬಾಳ್ವೆಗೇ ||೨||

ಎಲ್ಲವೂ ನನ್ನದೇ
ಬಾಳುವೆ ಶಾಶ್ವತ
ಎನ್ನುವ ಆಸೆ
ಮನಸಿನ ಭ್ರಮೆಯೂ ||೩||

ತರದೆಲೆ ಏನನೂ
ಬಂದಿದೆ ಭುವಿಗೇ
ಕರ್ಮದ ಗಂಟನು
ಹೊತ್ತಿಹ ಜೀವ ||೪||

ಮಾಡಿದ ಕರ್ಮದ
ಫಲವನು ಹೊತ್ತು
ಮುಂದಿನ ಜನ್ಮಕೆ
ಹೋಹುದು ||೫||

ಕಾಲನ ದವಡೆಗೆ
ಸಿಲುಕಿದ ಬಾಳಿದು
ಎಣಿಕೆಗೆ ಸಿಗದು
ಬಲು ಕ್ಷಣಿಕ ||೬||

ಮನೆ, ಸಂಸಾರದ
ಹೊಣೆಯನು ಹೊತ್ತು
ನಾರಿಯ ಮೋಹದ
ಪಾಶಕೆ ಸಿಲುಕಿ ||೭||

ನಾನೇ ಶಾಶ್ವತ
ಎಲ್ಲವೂ ನನ್ನದೇ
ಎನ್ನುವ ಭ್ರಮೆಯನು
ಮನದಿಂ ತೊರೆದೂ ||೮||

ಫಲವನು ಬಯಸದೆ
ಕರ್ಮವ ಮಾಡಿ
ಎಲ್ಲವೂ ಕರ್ಮದ
ಫಲವೆಂದರಿತೂ ||೯||

ಜ್ಞಾನದ ನೇತ್ರವ
ನಿತ್ತಿಹ ಶಿವನನು
ಪರಮ ಪಿತನನು
ನೆನೆಯೋಣ ||೧೦||

ತಂದೆಯ ನೆನೆಯುತ
ಪಾವನರಾಗುತ
ಯೋಗಿಗಳಾಗಿ
ಬಾಳೋಣ ||೧೧||



ಕಾ
ವ್ಯ
ವಾ
ಹಿ
ನಿ

## ಜ್ಞಾನಕ್ಕೆ ಶರಣು

—ಎಂ. ಜಿ. ವೆಂಕಟೇಶಯ್ಯ

ಜ್ಞಾನಕ್ಕೆ ಶರಣಾಗೊ ಮನುಜಾ।
ಜ್ಞಾನ ಜ್ಯೋತಿಗೆ ಶರಣಾಗೊ ಮನುಜಾ। ||ಪ||

ನಶ್ವರ ಬಾಳಿದು ಮನುಜಾ
ಅದ ತಿಳಿದು ನೀ ಬಾಳಯ್ಯ ಮನುಜಾ।
ನಿನ್ನನೀ ತಿಳಿದು ಅಂತೆ ನೀ
ನಡೆದರೆ ಜೀವನ ಪಾವನ ಮನುಜಾ। ||೧||

ದೇಹವೇ ದೇಗುಲ ಮನುಜಾ
ಸದ್ಭಾವನೆ ಶಿವನಯ್ಯ ಮನುಜಾ।
ನಡೆ-ನುಡಿ ನಿನ್ನಲ್ಲಿ ಮನುಜಾ
ಹಾಲು-ಸಕ್ಕರೆಯಾಗಿರಲಿ ಮನುಜಾ। ||೨||

ಕಣ್ಣು-ನಾಲಗೆಯಿಂದ ಮನುಜಾ
ನಿನ್ನ ಮನಸಿಂದ ನೀನಯ್ಯ ಮನುಜಾ।
ನಿನ್ನಂತೆ ಎಲ್ಲರ ಭಾವಿಸಿ ಬಾಳನು
ಬಂಗಾರ ಮಾಡಯ್ಯ ಮನುಜಾ। ||೩||

"ಲಲಿತಳದು ಒಂದೇ ಪೇಚಾಟ ನಾವು ಈ ಊರಿಗೆ ವರ್ಗವಾಗಿ ಬಂದು ಒಂದು ವರ್ಷಕ್ಕೆ ಹತ್ತಿರ ಬಂತು. ಒಂದಿನವಾದರೂ ನನ್ನ ಸ್ನೇಹಿತೆಯನ್ನು ನೋಡಲಿಲ್ಲ. ಸಂಕ್ರಾಂತಿಯ ಎಳ್ಳು ಹಂಚಿ ಬರುವುದಕ್ಕಾದರೂ ನನ್ನನ್ನು ಅವರ ಮನೆಗೆ ಕರೆದುಕೊಂಡು ಹೋಗಿ ಅಂತ ದೊಂಬಲು ಬಿದ್ದಳು. ಇವತ್ತು ಅದೂ ಆಯ್ತು, ಸ್ನೇಹಿತರ ದರ್ಶನ ಎಳ್ಳು-ಬೆಲ್ಲಗಳ ಕೊಡಿಗೆ" ತುಂಬುನಗೆ ನಕ್ಕ ಅಶೋಕ.

"ತಿಂಡಿ ತೆಗೆದುಕೊಳ್ಳಿ" ನಮ್ರವಾಗಿ ಒತ್ತಾಯಿಸಿದಳು ಅಪರ್ಣಾ.

"ನೀವು ನಮಗಾಗಿ ತುಂಬ ತೊಂದರೆ ತೆಗೆದುಕೊಂಡಿರಿ." ಕೃತಜ್ಞತೆಯ ನೋಟ ಚೆಲ್ಲಿ ವಿನಯವಾಗಿ ಹೇಳಿದ ಅಶೋಕ.

"ತೊಂದರೆಯೇನಿಲ್ಲ, ದೊಡ್ಡ ಮನಸ್ಸು ಮಾಡಿ ನೀವಿಷ್ಟು ದೂರದವರೆಗೂ ಬಂದ್ರಲ್ಲ" ಅಪರ್ಣಾ ಅಭಿಮಾನದ ನಗೆ ನಕ್ಕಳು.

"ಮನೆ ಹುಡುಕುವುದು ತುಂಬ ಕಷ್ಟವಾಯ್ತೆ, ಅಶೋಕ್ ?"

"ಸರಿಯಾದ ನಿಳಾಸ ಇತ್ತಲ್ಲ, ಅದ್ರಿಂದ ಅಷ್ಟೇನೂ ಕಷ್ಟವಾಗಲಿಲ್ಲ." ಹಿಂದಿನಿಂದ ಬಂದುನಿಂತ ಲಲಿತ ಹೇಳಿದಳು,

"ಮನೆ ದೂರವಾದ ಪ್ರದೇಶದಲ್ಲಿದ್ದರೂ ಬಹಳ ಸುಂದರವಾಗಿ ಕಟ್ಟಿಸಿದ್ದೀರ. ಆಧುನಿಕ ಸೌಕರ್ಯಗಳನ್ನೆಲ್ಲ ಮಾಡಿಸಿದ್ದೀರಿ !"

"ಎಲ್ಲ ಅರ್ಪಣಾಳ ಏರ್ಪಾಟು. ಈ ಮನೆಯ ಅಚ್ಚುಕಟ್ಟುತನದ ಹೊಗಳಿಕೆಯೆಲ್ಲ ಅವಳಿಗೇ ಸೇರಬೇಕಾದ್ದು." ಹೆಂಡತಿಯ ಕಡೆಗೆ ಓರೆನೋಟ ಬೀರಿ ನಕ್ಕ ಶ್ರೀಧರ.

ಗಂಡನ ಮಾತಿನಿಂದ ಅವಳಿಗೆ ಹೆಮ್ಮೆ ಎನ್ನಿಸಿತು. ಮಾತು ಮುಂದುವರೆಸಲು ದಾರಿಗಾಣದವಳಂತೆ ಲಲಿತಳ ತೋಳ್ಕೈಯಲ್ಲಿದ್ದ ಮುದ್ದು ಮಗು ಮೋಹನನನ್ನು ತನ್ನ ಕೈಗೆತ್ತಿಕೊಂಡು ಗಂಡನ ಮುಂದೆ ಹಿಡಿದು ಹೇಳಿದಳು,

"ನೋಡಿ, ಎಷ್ಟು ಮುದ್ದಾಗಿದ್ದಾನೆ ಮೋಹನ !"

ಮೋಹನ ಶ್ರೀಧರನ ಮುಖ ಕಂಡೊಡನೆಯೇ ಹಲವು ವರ್ಷಗಳ ಪರಿಚಿತ ನೆಂಟನಂತೆ ಒಮ್ಮೆಲೇ ಹಾರಿ ಅವನ ಕುತ್ತಿಗೆಗೆ ತೆಕ್ಕೆಬಿದ್ದ.

ಅವನ ಹಾಲುಗಲ್ಲದ ಸೋಕಿಗೆ ಮುಗ್ಧನಾಗಿದ್ದ ಶ್ರೀಧರ. ಮಗುವಿನ ಮೃದುವಾದ, ರೇಶಿಮೆಯಂತಹ ಕೂದಲು ! ನವುರಾದ ಹಾಲುಗಲ್ಲ ! ತುಂಬು ಗೆನ್ನೆಗಳು ! ಗಾಜಿನಂತೆ ಹೊಳೆಯುವ ಕಪ್ಪುಕಣ್ಣುಗಳು ! ಅದರ ಚೆಂದುಟಿಗಳಲ್ಲಿ ಅರಳಿನಿಂತ ತುಂಬುನಗೆ.

"ಮೋಹನ ! ಮೋಹನ !" ಶ್ರೀಧರ ತನಗರಿವಿಲ್ಲದಂತೆಯೇ ಮೋಹನನನ್ನು ಮುದ್ದಿಸುತ್ತಿದ್ದ.

ಮುದ್ದಿನ ಪ್ರತಿ ಮುಯ್ಯಿ ತೀರಿಸಿಬಿಡುವುದು ಮೋಹನನ ಆವೇಶದ ಪ್ರತಿಕ್ರಿಯೆ. ಅವನಿಗೆ ಆವೇಶ ಬಂದರೆ ತಾನೂ ಪ್ರತಿಯಾಗಿ ಮುದ್ದಿಸಿಬಿಡುತ್ತಿದ್ದ. ಈಗ ಶ್ರೀಧರನಿಗೆ ಆ ಪಾಳಿ ದೊರಕಿತ್ತು.

ಮೋಹನನ ಎಳೆಯ ಚಿಗುರಿನಂತಹ ಕೆಂದುಟಿಗಳು ಶ್ರೀಧರನ ಕೆನ್ನೆಗೆ ಸೋಕಿದ್ದವು.

ಶ್ರೀಧರನ 'ಪುತ್ತ' ನ್ನು ಹಿಂದುರಿಗಿಸಿದ್ದ ಮೋಹನ.

'ಓ! ಪುತ್ತು ! ಎಲೋ ಕಳ್ಳ ! ಶ್ರೀಧರ್ ನೀವು ತುಂಬ ಅದೃಷ್ಟವಂತರು. ನಮ್ಮ ಮೋಹನ ನಿಮಗೆ 'ಪುತ್ತು' ಕೊಟ್ಟುಬಿಟ್ಟ ನೋಡಿ. ಲಕೀಛಾನ್ಸ್ ! ಉದ್ಗಾರ ಎಳೆದ ಅಶೋಕ.

ಲಲಿತಳ ತಾಯಿ ಕಣ್ಣು ಮಗುವಿನ ತುಂಟಾಟಿಕೆಯನ್ನು ಕಂಡು ಹಿಗ್ಗಿತ್ತು.

ಅಪರ್ಣಾ ತನ್ನ ಬಟ್ಟಲುಗಣ್ಣುಗಳನ್ನು ಅಗಲಿಸಿ ನೋಡುತ್ತ ನಿಂತಿದ್ದಳು. ಮೊದಲು ನಲಿವಿನಿಂದ ಅರಳಿದ್ದ ಅವಳ ತುಟಿಗಳು ಈಗ ಮಾತ್ಸರ್ಯದ ಮೊಗ್ಗಿನಂತೆ ಮುಚ್ಚಿಕೊಂಡವು. ನಲಿವಿನಲ್ಲೂ ನೋವನ್ನನುಭವಿಸಿದ್ದಳು. ಆ ದೃಶ್ಯವನ್ನು ಇನ್ನಷ್ಟು ಹೊತ್ತು ನೋಡುತ್ತ ನಿಂತಿರಲು ಅವಳ ತಾಳ್ಮೆಸಾಯುವಾಗಿತ್ತು. ಅವಳು ಒಳ ಸರಿದಿದ್ದರೂ ಮಗುವಿನ ಲಲ್ಲೆಯದನಿ ಕೇಳಿಬರುತ್ತಲೇ ಇತ್ತು.

ಮೋಹನ ಶ್ರೀಧರನಿಗೆ ಸೂಜಿಗಲ್ಲಿಗೆ ಆಕರ್ಷಿತವಾಗುವ ಸೂಜಿಯಂತೆ ಅಂಟಿಕೊಂಡು ಬಿಟ್ಟಿದ್ದ. ಅವನು ಕಲಿತಿರುವ ಆಟ ಪಾಟಗಳ ಪ್ರದರ್ಶನವೆಲ್ಲ ಒಂದೊಂದೊಂದಾಗಿ ಶ್ರೀಧರನ ಮುಂದೆ ಸುತ್ತಿಟ್ಟ ಸುರುಳಿಯಂತೆ ಬಿಚ್ಚಿಕೊಳ್ಳುತ್ತಿತ್ತು. ಆ ಒಂದೊಂದು ಪ್ರದರ್ಶನದಲ್ಲೂ ಹೆಚ್ಚಿನ ಆಕರ್ಷಣೆ, ಅತಾಕಿಕ ಹಿತವನ್ನು ಕಾಣುತ್ತಿದ್ದ ಶ್ರೀಧರ.

ಗೆಳತಿಯ ಹಿಂದೆ ಮನೆಯನ್ನೆಲ್ಲ ಸುತ್ತಾಡಿಬಂದ ಲಲಿತ ಮನೆಯಲ್ಲಿನ ದೊಡ್ಡಲೋಪವನ್ನು ಗಮನಿಸಿದಳಂತೆ ಕೇಳಿದಳು.

"ಅಪರ್ಣಾ, ಎಷ್ಟು ದೊಡ್ಡದಾದ ಮನೆ! ಎಲ್ಲರೀತಿಯ ಸೌಲಭ್ಯ, ಆನಂದ ಎಲ್ಲ ಇದೆ. ಆದರೆ ಇಲ್ಲಿ ಒಂದು ತೂಗು ತೊಟ್ಟಿಲು ಇದ್ದಿದ್ದರೆ ಈ ಮನೆಯ ಅಂದ ಇನ್ನೂ ಹೆಚ್ಚುತ್ತಿತ್ತು. ಅದುನಿನ್ನ ಕೈಲೇ ಇರುವ ವಿಚಾರ ! "

ಗೆಳತಿಯಾಡಿನ ಮಾತಿನಿಂದ ಅವಳ ಮುಖ ಚಿಕ್ಕದಾಯಿತು. ಅಪಾರ ವೇದನೆಯನ್ನನುಭವಿಸಿದಳಂತೆ ಖಿನ್ನಳಾಗಿ ಹೇಳಿದಳು,

"ಇಷ್ಟು ದೊಡ್ಡಮನೆಯನ್ನು ನನ್ನವರು ಹಣ ಕೊಟ್ಟು ಕಟ್ಟಿಸಿದರು, ಆದರೆ ಈ ಮನೆಗೆ ಬರಬೇಕಾದ ನನ್ನಬಾಳಿನ ಕುಡಿಯನ್ನು ಚಿಗುರಿಸುವುದಕ್ಕೆ ನನಗೆ ಸಾಧ್ಯವಾಗದೆ ಹೋಗಿದೆಯಲ್ಲ, ಲಲಿತಾ ಒಮ್ಮೊಮ್ಮೆ ಅದೇ ಚಿಂತೆ ನನ್ನನ್ನು ಹಿಂಡಿ ಹಿಪ್ಪೆಮಾಡುತ್ತದೆ.

"ಏಕೆ? ನಿನಗೆ ಮಕ್ಕಳಾಗಲು ದೈಹಿಕವಾಗಿ ಏನಾದರೂ ತೊಂದರೆ ಇದೆಯೇನು ? ಹಾಗಿದ್ದರೆ ಪರೀಕ್ಷೆಮಾಡಿಸೋಣ. ಔಷಧಿಕೊಡಿಸಿದರೆ ಆಯಿತು."

"ಡಾಕ್ಟರರ ಹತ್ತಿರ ಎಲ್ಲ ಪರೀಕ್ಷೆಗಳನ್ನೂ ಮಾಡಿಸಿದೆವು. ಅಂಥ ತೊಂದರೆ ಏನಿಲ್ಲ ಅಂತ ಹೇಳಿದರು. ಆದರೂ ನಾನು ಮಾತ್ರ ತಾಯ್ತನ ವಿಲ್ಲದ ಹತಭಾಗಿನಿ, ನನ್ನವರಿಗೆ ಮಕ್ಕಳನ್ನು ಕಂಡರೆ ತುಂಬ ಪ್ರೀತಿ–ಅವರು ಬೇರೆಯವರ ಮಕ್ಕಳನ್ನು ಕಂಡು ಮುದ್ದಿಸುವುದನ್ನು ಕಂಡಾಗಲೆಲ್ಲ ನನ್ನ ಕರುಳನ್ನು, ಕಣ್ಣನ್ನು ಶಸ್ತ್ರಗಳಿಂದ ಚುಚ್ಚಿದಂತಾಗುತ್ತದೆ. ಆದರೆ ನಾನು ಹಾಗೆ ಮತ್ಸರಪಡುವುದು ತಪ್ಪು ಅಂತ ನನಗೆ ಗೊತ್ತಿದೆ. ಗೊತ್ತಿದ್ದರೂ ನನ್ನಲ್ಲಿ ಹರಿಯುತ್ತಿರುವ ಹೆಣ್ಣಿನ ರಕ್ತ ಮಾತ್ರ ಮತ್ಸರದ ಕಿಡಿಯನ್ನು ಹೊತ್ತಿಸಿಬಿಟ್ಟಿರುತ್ತದೆ. ಏನುಮಾಡಲಿ ? ನನ್ನವರು ತುಂಬ ಒಳ್ಳೆಯವರು. ನನ್ನನ್ನು ತುಂಬ ಪ್ರೀತಿಸುತ್ತಾರೆ. ಆದರೆ ಅವರ ಪ್ರೀತಿಗೆ ಫಲ ಕೊಡುವ ಮರ ನಾನಾಗಬೇಕಂತೆ. ಇದು ಅವರ ಆಸೆ. ನನ್ನ ಆಸೆಕೂಡ ಅದೇ. ನನ್ನಂಥ ಹತಭಾಗ್ಯಳಿಗೆ ಬೇರೆದಾರಿ ಏನಿದೆಯೋ"?

"ನನ್ನ ಪರಿಸ್ಥಿತಿಯೂ ಒಮ್ಮೆ ಹೀಗೇ ಆಗಿತ್ತು, ಅಪರ್ಣಾ. ನಮ್ಮ ಅತ್ತೆಯಮನೆಯ ಜನ ಇನ್ನೂ ಮುಂದುವರಿದವರು. ನನ್ನವರಿಗೆ ಬೇರೆ ಮದುವೆಮಾಡಲು ಹೆಣ್ಣು ನೋಡಲು ಓಡಾಡುತ್ತಿದ್ದರು ಕೂಡ ನರಕ ಹಿಂಸೆಯನ್ನನುಭವಿಸುತ್ತಿದ್ದೆನಾನು. ಈ ಮೋಹನ ಹುಟ್ಟಿದ್ದು ಸಿದ್ಧಗಂಗೆಯ ಪೂಜಾಫಲ. ಸಿದ್ಧಗಂಗೆಯ ತಡಿಯಲ್ಲಿರುವಿ ಗವಿಯ ಗಂಗಮ್ಮನ ಆರಾಧನೆಯಿಂದ ನನ್ನ ಆಸೆ ಫಲಿಸಿತು. ಮೊನ್ನೆ ಆ ಕ್ಷೇತ್ರದರ್ಶನ ಮಾಡಿಬಂದೆವು.

ನೀನು ನಂಬಿದರೆ ನಂಬು, ಬಿಟ್ಟರೆ ಬಿಡು. ಆ ಕ್ಷೇತ್ರದ ಪ್ರಭಾವದಿಂದ ನನಗೊಬ್ಬಳಿಗೇ ಅಲ್ಲ ನನ್ನಂಥ ಸಹಸ್ರಾರು ಹತಭಾಗಿನಿರ ಬಾಳು ಶಾಂತಿಯನೆಲೆವೀಡಾಗಿದೆ. ನೀನು ನೋಡಿ ಬಂದಾಗ ನಂಬುತ್ತೀ. ಪ್ರಕೃತಿಯರಮ್ಯತೆಯ ಅಂಚಿನಲ್ಲಿ ನಿಂತಿರುವ ಸಿದ್ಧಗಂಗೆಯ ಬೆಟ್ಟಗಳ ಸಾಲು ! ರಮ್ಯತೆಯ ಸ್ವರ್ಗಕ್ಕೇರಿಸಲು ಸಿದ್ಧರಂತೆ ನಿಂತಿರುವ ಆ ಸೋಪಾನಗಳು ! ದುಃಖಗಳನ್ನು ಸಂತೈಸುವ ಶಾಂತಿಯ ಸಂದೇಹವನ್ನು ಸಾರುವ ಶ್ರೀ ಸ್ವಾಮೀಜಿಯವರು ! 'ಗುಡಾಣದಷ್ಟು ಕಿರಿದಾಗಿದ್ದರೂ ಕಡಲಿ ನಾಳದಷ್ಟು ನನ್ನಹಿರಿಮೇ! ' ಎಂದು ಸಾರಿ ಹೇಳುವ ಆ ತಾಯಿ ಸಿದ್ಧಗಂಗೆಯ, ಶುದ್ಧಗಂಗೆಯ ಪಾದೋದಕ ಒಮ್ಮೆ ನಿನ್ನ ಮೇಲೆ ಸೇಚನವಾದರೂ ಸಾಕು ನಿನ್ನ ನಿರ್ಧಾರಕ್ಕೆ, ಆಸೆಗೆ ಅಸ್ತು ಎನ್ನುತ್ತದೆ ಪ್ರಕೃತಿ. ಹೆಣ್ಣು ನಂಬಿಕೆಯ ಆಗರ! ಕಲ್ಪನೆಯ ದ್ಯೋತಕ ! ಆಕೆಯ ಮನಸ್ಸು ಭಕ್ತಿಯನೆಲೆ ! ಪ್ರೀತಿಯ ಕಡಲಿನಾಳಕ್ಕೆ ಮುಳುಗಿ ಆಸೆಯ ಮುತ್ತುಗಳನ್ನೆತ್ತುತ್ತಾಳೆ. ಒಂದು ದಿನ ಹೋಗಿ ಬನ್ನಿ. ಬರುವ ವರ್ಷದ ಸಂಕ್ರಾಂತಿಗೆ ನಿನ್ನ ಜೀವನ ಬದಲಾದೀತು"

ಲಲಿತೆ ಆಡಿದ ಒಂದೊಂದು ಮಾತೂ ಪ್ರೀತಿಯ ಮುತ್ತುಗಳು ಉದುರಿದಂತಿದ್ದವು ಅಪರ್ಣಳಿಗೆ.

'ನಾನು ಖಂಡಿತ 'ಸಿದ್ಧಗಂಗೆಯ' ದರ್ಶನಮಾಡಿ ಬರುತ್ತೇನೆ. ಗೆಳತಿಯ ನುಡಿಗೆ ತುಂಬು ಹೃದಯದಿಂದ ಹರಸಿದಳು ಲಲಿತ, ಅಪರ್ಣಾ ಹಿಡಿದ ಹಠದಂತೆ ಸಿದ್ಧಗಂಗೆಯ ದರ್ಶನಮಾಡಿ ಶುದ್ಧಗಂಗೆಯನ್ನು ಪಾನಮಾಡಿದಳು. ಅವಳ ಮೈ ಮನಸ್ಸುಗಳು ಸುತ್ತಲಿನ ಪ್ರಕೃತಿಯ ರಮ್ಯತೆಯಿಂದ ಹೊಸತನವನ್ನು ಹೊತ್ತಳು. ಅವಳು ಬದಲಿಸಿದ ಹೆಣ್ಣಾದಳು. ಅವಳಾಸೆ ಕೈ ಗೂಡಿತ್ತು.

26ನೇ ಪುಟ ನೋಡಿ

# ಕನ್ನಡ ಮಾಧ್ಯಮವಿಲ್ಲದ ನಮ್ಮ ಶಿಕ್ಷಣ ನಿರೀಕ್ಷಿಸಿದ ಮಟ್ಟವನ್ನು ಮುಟ್ಟಿದೆಯೆ ?

—ಟಿ. ಆರ್. ಮಹದೇವಯ್ಯ,

ವಿದ್ಯಾಭ್ಯಾಸದ ವಿಷಯದಲ್ಲಿ ಸರಿಯಾದ ದಾರಿ ಯಾವುದು ? ಅದನ್ನು ಸಾಧಿಸಲು ನಾವೇನು ಮಾಡಬೇಕು ? ಇದು ನಮ್ಮ ಮುಂದಿರುವ ಪ್ರಶ್ನೆ. ಶಿಕ್ಷಣದ ಗುರಿ ಜನಾಂಗದ ಸರ್ವತೋಮುಖವಾದ ಅಭಿವೃದ್ಧಿ. ಮುಖ್ಯವಾಗಿ ಕಲಿತದ್ದು ಜೀವನದಲ್ಲಿ ಉಪಯೋಗವಾಗಬೇಕು. ಶಿಕ್ಷಣವು ವಿದ್ಯಾರ್ಥಿಯ ವ್ಯಕ್ತಿತ್ವವು ಸಂಪೂರ್ಣವಾಗಿ ವಿಕಸಿಸುವ ಸನ್ನಿವೇಶವನ್ನು ಕಲ್ಪಿಸಿ; ಆತನು ಸಮಾಜಕ್ಕೆ ಸಲ್ಲಿಸಬೇಕಾಗಿರುವ ಕಾಣಿಕೆಯನ್ನು ರೂಪಗೊಳಿಸುವ ಏಕಮಾತ್ರ ಸಾಧನ. 'ಶಿಕ್ಷಣದಿಂದ ಮನಸ್ಸು ಸಂಸ್ಕಾರಗೊಳ್ಳಬೇಕು ; ಉತ್ತಮ ವಿವೇಚನಾಶಕ್ತಿ ಮೂಡಬೇಕು ; ವ್ಯಕ್ತಿಯಲ್ಲಿ ಅಡಗಿರವ ಅಮೃತತ್ವ ವಿಕಾಸವಾಗಬೇಕು ; ಮಾನವರ ಎಲ್ಲ ಸಾಮರ್ಥ್ಯಗಳೂ, ಅಭಿರುಚಿಗಳೂ ಸಮರಸವಾಗಿ ಬೆಳೆಯಬೇಕು' ಎಂದು ಮೊದಲಾಗಿ ಶಿಕ್ಷಣತಜ್ಞರು ಶಿಕ್ಷಣದ ಗೊತ್ತುಗುರಿಗಳನ್ನು ಕುರಿತು ಹೇಳಿದ್ದಾರೆ.

ಈ ಉದ್ದೇಶವನ್ನು ಸಾಧಿಸಲು ಮಕ್ಕಳಿಗೆ ಎಂಥ ಶಿಕ್ಷಣವನ್ನು ದೊರಕಿಸಬೇಕು ಮತ್ತು ಹೇಗೆ ? ಜ್ಞಾನಗಂಗೆ, ಅದು ಯಾವುದೇ ಇರಲಿ, ಪ್ರವಹಿಸಬೇಕಾದ್ದು ಭಾಷೆಯ ಕಾಲುವೆಯ ಮೂಲಕವೇ, ಜ್ಞಾನದ ವೀಚಿಗಳು, ಅವುಗಳ ಪ್ರಕಾರಗಳು, ಎಷ್ಟು ಪ್ರಾಮುಖ್ಯವೋ, ಅವು ಅಭಿವ್ಯಕ್ತಗೊಳ್ಳುವ ಭಾಷೆಯೂ ಅಷ್ಟೇ ಮುಖ್ಯ ಎಂಬ ಮಾತನ್ನು ಅಲ್ಲಗಳೆಯುವಂತಿಲ್ಲ. ಒಂದು ಭಾಷೆ ಸತ್ವಪೂರ್ಣವಾಗಿದ್ದರೆ ಆ ವಿಚಾರಗಳನ್ನು ಅವು ಎಷ್ಟೇಗಡುಸಾಗಿರಲಿ, ಸ್ಪಷ್ಟವಾಗಿ ವ್ಯಕ್ತಪಡಿಸುತ್ತದೆ. ಭಾಷೆ ಎಷ್ಟೆಷ್ಟು ಅನುಕೂಲಸ್ಥಿತಿಗೆ ಬರುವುದೋ ಅಷ್ಟಷ್ಟು ಉದ್ದೇಶ ಸಾಧನ ಸುಲಭವಾಗುತ್ತಾ ಬರುವುದು. ಯಾವುದೇ ಶಾಸ್ತ್ರವಾಗಲಿ, ವಿಜ್ಞಾನವಾಗಲೀ ಅದು ಭಾಷೆಯಲ್ಲಿ ಅಭಿವ್ಯಕ್ತಗೊಳ್ಳುತ್ತದೆ. ಆಭಾಷೆಯ ಪರಿಚಯವಿಲ್ಲದಿದ್ದರೆ ಆ ಜ್ಞಾನ ರಾಶಿಯಿಂದ ವಂಚಿತರಾಗಬೇಕಾಗುತ್ತದೆ, ನಮಗೆ ತಿಳಿದಿರುವ ಭಾಷೆಯಲ್ಲಿ ಅಥವಾ ನಾವು ಆಡುವ ಮಾತಿನಲ್ಲಿ ವ್ಯಕ್ತವಾದ ಜ್ಞಾನವನ್ನು ನಾವು ಅರ್ಥಮಾಡಿಕೊಂಡಂತೆ ಅನ್ಯಭಾಷೆಯಲ್ಲಿ ಮೂಡಿದ ಜ್ಞಾನವನ್ನು ಸುಲಭವಾಗಿ ಅರ್ಥಮಾಡಿಕೊಳ್ಳಲಾಗುವುದಿಲ್ಲ ; ಅರಗಿಸಿಕೊಳ್ಳುವುದಂತೂ ಬಹಳ ಕಷ್ಟ. ಅಷ್ಟೇ ಅಲ್ಲ, ನಮ್ಮ ತಾಯ್ನುಡಿನಲ್ಲಿ ಹೇಳುವಷ್ಟು ಸರಳವಾಗಿ, ಚೆನ್ನಾಗಿ ಅನ್ಯಭಾಷೆಯಲ್ಲಿ ಹೇಳಲಾಗುವುದಿಲ್ಲ. ಇದು ಎಲ್ಲರ ಅನುಭವಕ್ಕೆ ಬಂದಿರುವ ಮಾತು. ಪಾಠ ಹೇಳುವವನಿಗಾಗಲೀ, ಕೇಳಿ ಬರೆಯುವವನಿಗಾಗಲೀ ಸತ್ವಯುತ ಭಾಷಾ ಮಾಧ್ಯಮ ಅನಿವಾರ್ಯವೆಂದಾಯಿತು. ಓದಿದ್ದನ್ನು, ತಿಳಿದಿದ್ದನ್ನು ಬರೆಯಲು ಭಾಷಾ ಸಾಮರ್ಥ್ಯ ಬೇಡವೇ ? ಭಾಷೆ ಸಮೃದ್ಧವಾದರೆ, ಸಮರ್ಥವಾದರೆ ನಿರೂಪಣೆ ಹೃದ್ಯವಾಗುತ್ತದೆ. ಒಂದು ನಾಡಿನ ಸರ್ವಾಂಗೀಣ ಪ್ರಗತಿಯನ್ನು ಸಾಧಿಸಬಯಸುವವರು ಮೊಟ್ಟಮೊದಲಿಗೆ ಯೋಗ್ಯ ಶಿಕ್ಷಣಕ್ಕೆ ಬುನಾದಿ ಹಾಕಬೇಕಾಗುತ್ತದೆ. ಏಕೆಂದರೆ ಯೋಗ್ಯ ಶಿಕ್ಷಣವಿಲ್ಲದೆ ಯಾವ ದೇಶವೂ ಮುಂದುವರಿಯಲಾರದು. ದೇಶದ ಚೈತನ್ಯತೆಗೆ ಯೋಗ್ಯ ಶಿಕ್ಷಣ ಕ್ರಮವಿಲ್ಲದ್ದೇ ಕಾರಣ ಎಂಬ ಮಾತು ಸತ್ಯ.

ಭರತ ಖಂಡದ್ದು ಬಹಳ ವಿಚಿತ್ರ ಪರಿಸ್ಥಿತಿ. ದೇಶ ಸ್ವತಂತ್ರವಾಗಿದ್ದರೂ ಇಲ್ಲಿ ಭಾಷಾ ಸ್ವಾತಂತ್ರ್ಯವೆಂಬುದಿಲ್ಲ. ಅನೇಕ ಭಾಷೆಗಳು ಇಲ್ಲಿವೆ. ಸಮಗ್ರ ದೇಶಕ್ಕೆ ಒಂದು ಅಧಿಕೃತ ಭಾಷೆಯಿಲ್ಲ. ಸದ್ಯಕ್ಕೆ ಪರಭಾಷೆಯಾದ ಇಂಗ್ಲೀಷೇ ವ್ಯವಹಾರ ಭಾಷೆಯಾಗಿದೆ. ಶಿಕ್ಷಣ ಮಾಧ್ಯಮವೂ ಬಹುಮಟ್ಟಿಗೆ ಅದೇ ಆಗಿದೆ ! ಬ್ರಿಟಿಷ್ ಆಧಿಪತ್ಯದ ಕಾಲದಲ್ಲಿ ಆಡಳಿತ ವ್ಯವಹಾರವೆಲ್ಲಾ ಇಂಗ್ಲೀಷಿನಲ್ಲಿತ್ತು. ಭಾರತೀಯರು ಆ ಭಾಷೆಯನ್ನು ಕಲಿಯಬೇಕಾದ ಅಗತ್ಯವಿತ್ತು. ಅದರ ಪರಿಣಾಮವಾಗಿ ಇಂದಿನವರೆಗೆ ಅದಕ್ಕೆ ಪ್ರಾಶಸ್ತ್ಯ ಉಳಿದಿದೆ. ಭಾರತ ಸ್ವತಂತ್ರವಾಯಿತು. ಹೊರಗಿನ ಸಂಕೋಲೆ ಕಳಚಿ ಬಿದ್ದರೂ



ನಾವು ಅಂತರಂಗದಾಸ್ಯದಿಂದ ಮುಕ್ತರಾಗಿಲ್ಲ. ಪ್ರಪಂಚದ ಇನ್ನಾವ ದೇಶಗಳಲ್ಲೂ ಪರಭಾಷೆಯ ಮೂಲಕ ಪಾಠಪ್ರವಚನಗಳನ್ನು ನಡೆಸುತ್ತಿಲ್ಲವೆನ್ನಬಹುದು. ಈ ದಾಸ್ಯದ ಪರಮಾವಧಿ ಭಾರತಕ್ಕೆ ಮಾತ್ರ ಮೀಸಲಾಗಿದೆ. ತೀರ ಸಣ್ಣ ದೇಶಗಳಾದ, ಬೆಲ್ಜಿಯಂ, ಹಾಲೆಂಡ್‌ಗಳಲ್ಲೂ ದೇಶಭಾಷೆಗಳ ಮಾಧ್ಯಮವಿದೆ. ನೂರಾರು ವರ್ಷಗಳಿಂದ ಇಂಗ್ಲೆಂಡಿನೊಡನೆ ಬೆರೆತಿರುವ ಸ್ಕಾಟ್‌ಲೆಂಡ್ ಕೂಡ ತನ್ನ ದೇಶ ಭಾಷೆಯನ್ನು ಬಿಟ್ಟುಕೊಟ್ಟಿಲ್ಲ. ಈ ಎಲ್ಲ ದೇಶಗಳಲ್ಲಿ ಪಾಠ ಭಾಷೆ, ಪ್ರವಚನ ಭಾಷೆ, ಪರೀಕ್ಷೆ ಭಾಷೆಗಳು ಒಂದೇ ಆಗಿವೆ. ಆದರೆ ನಮ್ಮಲ್ಲಿ ಮನೆ ಮಾತು ಒಂದು, ಪಾಠ ಕೇಳುವುದೊಂದು, ಪರೀಕ್ಷೆಯಲ್ಲಿ ಬರೆಯುವುದು ಇನ್ನೊಂದು. ಎಂಥ ಅಸಂಗತ ! ನಾಡು ಜನಾಂಗದ ಪ್ರಾಕೃತಿಕ ಸ್ವರೂಪ ಮಾತ್ರ. ನುಡಿಯೋ ಅದರ ಜೀವ, ಆತ್ಮ. ಭಾಷೆ ಜನರನ್ನು ಸೇರಿಸತಕ್ಕ ಒಂದು ಅಂಟು, ನಂಟು. ಅದು ಐಕ್ಯತೆಯ ಸೂತ್ರ ಇಡೀ ಭರತ ಖಂಡದಲ್ಲಿ ಒಂದು ಅಧಿಕೃತ ದೇಶೀಯವಾದ ವ್ಯವಹಾರಿಕ ಭಾಷೆಯಿದ್ದರೆ ಎಷ್ಟು ಚೆನ್ನಾಗಿತ್ತು.

ಕರ್ನಾಟಕದಲ್ಲಿ ಪರಿಸ್ಥಿತಿ ಮತ್ತಷ್ಟು ದಾರುಣವಾಗಿದೆ. ಕನ್ನಡನಾಡಿನಲ್ಲೇಕನ್ನಡ ಪರದೇಶಿಯಾಗಿದೆ ಇಂಗ್ಲೀಷ್ ಭಾಷೆಯ ಪ್ರಭಾವ ಅತಿಯಾಗಿ ಭಾಷೆ ಅರುಕುಮುರುಕಾಗಿದೆ, ಹರಿದು ಹಂಚಿಹೋದ ನಾಡು ಒಂದಾಯಿತು. ಆದರೆ ಅರುಕು ಮುರುಕಾಗುತ್ತಿರುವ ನಮ್ಮ ನುಡಿ ಉಳಿದು ತನ್ನ ತನವನ್ನು ಕಾಪಾಡಿಕೊಳ್ಳುವುದುಯಾವಾಗ ? ಎಂಬುದು ವಿಚಾರವಂತರ ತಲೆತಿನ್ನುತ್ತಿದೆ. ಒಂದು ಭಾಷೆಯ ಅಳಿವು-ಉಳಿವು ಅದನ್ನು ಉಪಯೋಗಿಸುವ ಜನರ ಜಾಯಮಾನವನ್ನವಲಂಬಿಸಿರುತ್ತದೆ. ಜನ ಸ್ವಾಭಿಮಾನ ಶೂನ್ಯರಾದರೆ, ಸೌಲಭ್ಯಾಕಾಂಕ್ಷಿಗಳಾದರೆ ಭಾಷೆ ಅಶುದ್ಧವಾಗುತ್ತದೆ. ಆ ಬೆರಕೆ ನುಡಿ ಸತ್ವಹೀನವಾಗುತ್ತದೆ; ನಿರ್ಜೀವವಾಗುತ್ತದೆ. ಸತ್ವಹೀನ ನುಡಿ ಯಾವ ಉದಾತ್ತ ವಿಚಾರಗಳನ್ನು ಸಮರ್ಥವಾಗಿ ತಿಳಿಸೀತು ? ಜೀವಾವಧಿ ಅಭ್ಯಾಸ ಮಾಡಿದರೂ ಪರ ಭಾಷೆಯು ಸ್ವಾಧೀನವಾಗುವುದು ಕಷ್ಟ. ಹೀಗಾಗಿ ನಮ್ಮ ಸ್ಥಿತಿ ಏನಾಗಿದೆಯೆಂದರೆ ಕನ್ನಡ ಹೋಗಲೊಲ್ಲದು, ಇಂಗ್ಲೀಷ್ ಬರಲೊಲ್ಲದು. ಇಂಗ್ಲೀಷ್ ಕಲಿಕೆಯನ್ನು ಬ್ರಿಟಿಷ್ ಸರಕಾರ ಭಾರತೀಯರ ಮೇಲೆ ಹೇರಿದಾಗ ಒಂದು ವಿಚಾರವನ್ನು ಸ್ಪಷ್ಟಪಡಿಸಿತ್ತು : 'ದೇಶಭಾಷೆಗಳಿಗೆ ಪ್ರತಿಯಾಗಿ ಇಂಗ್ಲೀಷ್ ಭಾಷೆಯನ್ನು ವಾಡಿಕೆಗೆ ತರಬೇಕೆಂಬುದು ನಮ್ಮ ಉದ್ದೇಶವಲ್ಲ. ಇದು ನಮಗೆ ಇಷ್ಟವೂ ಅಲ್ಲ. ಪ್ರಜಾವರ್ಗದ ಬಹುಮಂದಿಗೆ ತಿಳಿದಿರುವ ಭಾಷೆಗಳಲ್ಲಿ ಉಪಯೋಗಿಸುವುದು ಅವಶ್ಯಕವೆಂದು ನಾವು ಚೆನ್ನಾಗಿ ಬಲ್ಲೆವು. ( 'It is neither our aim no desire to substitute the English language for the vernacular dialects of the country. We have always been most sensible the importance of the use of of the language which alone are understood by the great mass of the population' )

ಅವರ ಉದ್ದೇಶ ಇಂಗ್ಲೀಷ್ ಕಲಿತು ನಮ್ಮ ಜ್ಞಾನದ ಕ್ಷಿತಿಜವನ್ನು ವಿಸ್ತಾರಗೊಳಿಸಿ ಕೊಳ್ಳಲಿ, ಕನ್ನಡಕ್ಕೆ ನೆರವಾಲಿ ಎಂದು. ಆದರೆ ನಾವು ಕನ್ನಡವನ್ನೇ ತೊರೆಯುತ್ತಿದ್ದೇವೆ. ನಾವು ಪೂರ್ಣ ವಿಕಾಸಗೊಳ್ಳಲು, ನಮ್ಮ ಜನರ ಬದುಕು ಒಂದಾಗಲು ದೇಶಭಾಷೆಯನ್ನು ಬಿಟ್ಟರೆ ಗತಿಯಿಲ್ಲ ಎಂಬುದು ತಿಳಿಯಲು ನಮಗೆ ಇನ್ನು ಎಷ್ಟು ಕಾಲ ಬೇಕು ?

ಶಿಕ್ಷಣ ಮಾಧ್ಯಮ ಇಂಗ್ಲೀಷು ಆಗಲು ದೇಶ ಭಾಷೆಗಳು ಸಾಕಷ್ಟು ಬೆಳದಿಲ್ಲವೆಂಬುದೇ ಕಾರಣ. ನಮ್ಮ ಮಾತೃಭಾಷೆಯಲ್ಲಿ ಸಮರ್ಪಕವಾದ ಪಾರಿ ಭಾಷಿಕ ಶಬ್ದಗಳಿಲ್ಲ; ಸರಿಯಾದ ಗ್ರಂಥಗಳಿಲ್ಲ. ಯಾವ ಕೊರತೆಯೂ ಇಲ್ಲದ ಇಂಗ್ಲೀಷೇ ಇರಲಿ ಎಂಬ ಸೌಲಭ್ಯಾಕಾಂಕ್ಷೆಯ ಮುಂದೆ ಭಾಷಾಭಿಮಾನಕ್ಕೆ ಎಳ್ಳು-ನೀರು ಬಿಟ್ಟರು. ಪರ ಭಾಷೆಯಿಂದ ಭಾವವಿಕಾಸ, ಬುದ್ಧಿವಿಕಾಸ, ಸಾಧ್ಯವೆ ಎಂದು ಯೋಚಿಸಲಿಲ್ಲ. "ಮನುಷ್ಯನ ಸಹಜವಾದ ಬುದ್ಧಿ ಕಾಣುವುದು ಅವನ ಮಾತೃಭಾಷೆಯಲ್ಲಿಯೇ ಅವನ ನುಡಿ ಅವನ ನೆರಳಿನಂತೆ ಅವನ ವ್ಯಕ್ತಿತ್ವದಿಂದ ಬೇರ್ಪಡಿಸಲಾಗದ್ದಾಗಿದೆ." ('The mother tongue is the true vehicle of mother-wi.... A man's speech is almost like his shadow inseparable from hispersonality)

ನಮ್ಮ ಭಾಷೆ ನಮ್ಮ ಮೈ ಚರ್ಮದಂತೆ ನಮ್ಮ ಶರೀರದೊಡನೆಯೇ ಬೆಳೆದಿದೆ. ಅದನ್ನು ಉಪಯೋಗಿಸಿದಂತೆ ನಾವು ಇನ್ನಿತರ ಯಾವ ಭಾಷೆಗಳನ್ನು ಉಪಯೋಗಿಸಲಾರೆವು. "ನಮ್ಮ ತಾಯಿನುಡಿಯ ಮೂಲಕವೇ ನಮಗೆ ವಿದ್ಯಾಭ್ಯಾಸ ಮಾಡಿಸಿದ್ದರಿಂದ ನಮ್ಮ ಬುದ್ಧಿ ಚುರುಕಾಗಲು ಕಾರಣವಾಯಿತು." —

It is because we taught in our own language that our quickened.

ಇದು ರವೀಂದ್ರನಾಥಠಾಕೂರರ ಸ್ವಾನುಭವ. ಸಾವಿರಾರು ಮೈಲಿಗಳಾಚೆಯಿಂದ ಬಂದು ನಮ್ಮನ್ನು ಆಳಿದ ಆಂಗ್ಲರ ಆಡಳಿತ ದೃಷ್ಟಿ, ಅದಕ್ಕೆ ಒದಗಿ[illegible] ಭಾಷೆ ಇನ್ನೂ ಇಲ್ಲಿ ಉಳಿಯಬೇಕೆ? ಬಂಗಾಳಿ, ಮ[illegible], ಹಿಂದಿ ಮೊದಲಾದ ಭಾಷೆಗಳವರಿಗೆ ಇರುವತಾಯ್ನುಡಿಯ ಮೇಲಣ ಅಭಿಮಾನದ ಹತ್ತನೆಯ ಒಂದು ಭಾಗವೂ ನಮ್ಮಲ್ಲಿಲ್ಲವೆಂಬುದು ಶೋಚನೀಯ ಸಂಗತಿ, ನಮ್ಮ ನೆರೆನಾಡುಗಳಾದ ತಮಿಳುನಾಡು, ಆಂಧ್ರ, ಕೇರಳ, ಮಹಾರಾಷ್ಟ್ರಗಳಿಂದಲೂ ನಾವು ಪಾಠ ಕಲಿಯಬಹುದಾಗಿದೆ.

ಕನ್ನಡದ ಮಕ್ಕಳು ಇಂಗ್ಲೀಷಿನ ಮೂಲಕ ಶಿಕ್ಷಣ ಪಡೆಯುತ್ತಾ ಬರುತ್ತಿರುವಾಗ ಆ ಶಿಕ್ಷಣ ನಿರೀಕ್ಷಿಸಿದ ಮಟ್ಟಕ್ಕೆ ಬರಲು ಹೇಗೆ ಸಾಧ್ಯ? ಮೂಲಧ್ಯೇಯಕ್ಕೆ ಕೊಡಲಿಪೆಟ್ಟು ಬಿದ್ದಿದೆಯಲ್ಲವೆ? ಅಧ್ಯಾಪಕ ಇಂಗ್ಲೀಷಿನಲ್ಲಿ ಬೋಧಿಸುತ್ತಿದ್ದರೆ ಮಕ್ಕಳು ಅರ್ಥಮಾಡಿಕೊಳ್ಳುವುದು ಕನ್ನಡ ಜ್ಞಾನದಲ್ಲಿ; ಆ ಬಗ್ಗೆ ವಿಚಾರ ಮಾಡುವುದು ಕನ್ನಡದಲ್ಲಿಯೇ. ಆದರೆ ಬರೆಯಬೇಕಾದದ್ದು ಇಂಗ್ಲೀಷಿನಲ್ಲಿ! ಈ ಕೃತಕವಾದ ಕ್ರಮದಿಂದ ಅವನ ಓದು ನಿರ್ಜೀವವೆನಿಸುತ್ತದೆ; ಶುಷ್ಕವಾಗುತ್ತದೆ. ವಿದ್ಯಾರ್ಥಿಗಳು ಕುಂಡದಲ್ಲಿರುವ ಸಸಿಗಳಾಗುತ್ತಾರೆ. ಕಲಿಕೆಯಲ್ಲಿ ಆಸಕ್ತಿ ಕುಂಠಿತವಾಗುತ್ತದೆ. ಪಾಠ ಹೇಳಲು ಎಷ್ಟು ಬೇಕೋ ಅಷ್ಟೇ ಓದುವ ಉಪಾಧ್ಯಾಯರು, ಪರೀಕ್ಷೆಗೆ ಎಷ್ಟು ಬೇಕೋ ಅಷ್ಟೇ ಓದುವ ವಿದ್ಯಾರ್ಥಿಗಳು ಹೆಚ್ಚುತ್ತಾರೆ. ಅನ್ಯ ಭಾಷೆಯ ಜ್ಞಾನರಾಶಿ, ಅದು ಎಷ್ಟೇ ಪ್ರಿಯವಾದರೂ ಓದುವ ಪ್ರವೃತ್ತಿಯನ್ನು ಕಡಿಮೆ ಮಾಡುತ್ತದೆ.

ಓದು ಕಡಿಮೆ, ವಿಚಾರ ಕಡಿಮೆ, ವಿದ್ಯಾರ್ಥಿಗಳು ಪರೀಕ್ಷಾರ್ಥಿಗಳಾಗುತ್ತಾರೆ. ಕುಂಡದಲ್ಲಿಯ ಗಿಡ ಹೂ ಬಿಡದಿದ್ದರೆ ಬಣ್ಣದ ಕಾಗದದಲ್ಲಿ ಹೂ ಕಟ್ಟಿ ಕೃತಕವಾಗಿ ಅಲಂಕಾರ ಮಾಡಿದಂತೆ ಪರ ಭಾಷೆಯಲ್ಲಿನ ಜ್ಞಾನವನ್ನು ಅರಗಿಸಿಕೊಳ್ಳಲಾಗದ ವಿದ್ಯಾರ್ಥಿ ಕೆಲವು ವಾಕ್ಯಗಳನ್ನು ಉರುಹಾಕಿ ಬರೆದು 'ಪಾಸಾರ್ಥಿ'ಯಾಗಿ ಬಿಡುತ್ತಾನೆ.

ವಿದ್ಯಾರ್ಥಿಯ ಯಾಂತ್ರಿಕತೆಗೆ ಇನ್ನೊಂದು ಕಾರಣವೂ ಇದೆ. ಓದು ಯಾವುದಾದರೂ ಆಗಲಿ' ಪ್ರಯೋಜನ ದೃಷ್ಟಿ ಇದ್ದೇ ಇರುತ್ತದೆ. ಕನ್ನಡ ಮಾಧ್ಯಮದಲ್ಲಿ ಅಭ್ಯಾಸ ಮಾಡಿದರೆ ಮುಂದಿನ ಓದು ಕಷ್ಟವಾಗುತ್ತದೆ. ಪಾಸು ಮಾಡಿದರೂ ಮುಂದೆ ಪ್ರಯೋಜನಕ್ಕೆ ಬರುವುದೋ ಇಲ್ಲವೋ. ಎಷ್ಟು ಓದಿದರೂ ಅಷ್ಟೆ ಕೆಲಸ ಸಿಕ್ಕುವುದಿಲ್ಲ. ಇಂಥ ವಿಚಾರಗಳು ಶಿಕ್ಷಣದ ಬಗೆಗೆ ಅನಾದರವನ್ನುಂಟುಮಾಡುತ್ತವೆ.

ಅನೇಕ ಶಿಕ್ಷಣತಜ್ಞರು ಇಂಗ್ಲೀಷ್ ಭಾಷಾಮಾಧ್ಯಮದಿಂದ ಉಂಟಾಗಿರುವ ಅನ್ಯಾಯಗಳನ್ನು ಪ್ರತಿಭಟಿಸಿದ್ದಾರೆ. "ಪರಭಾಷೆಯ ಮೂಲಕ ಕೊಡಿಸುವ ಶಿಕ್ಷಣ ನಮ್ಮ ಮಕ್ಕಳ ಬುದ್ಧಿಯನ್ನು ಬೆಂಡುಮಾಡಿದೆ, ನರಗಳನ್ನು ದುರ್ಬಲಗೊಳಿಸಿದೆ; ಅವರನ್ನು ಬಾಯಿಪಾಠ ಮಾಡುವ ಗಿಳಿಗಳನ್ನಾಗಿ ಮಾಡಿದೆ; ಪ್ರತಿಭಾನ್ವಿತವಾದ ಸೃಷ್ಟಿಕಾರ್ಯಕ್ಕೆ ಅನರ್ಹರನ್ನಾಗಿ ಮಾಡಿದೆ....ನಾನಿಂದು ಸರ್ವಾಧಿಕಾರಿಯಾಗಿದ್ದರೆ ಈ ಕೂಡಲೆ ಪರಭಾಷೆಯ ಮೂಲಕ ಆಗುತ್ತಿರುವ ವಿದ್ಯಾಭ್ಯಾಸವನ್ನು ನಿಲ್ಲಿಸುತ್ತಿದ್ದೆ" ಎಂದು ಗಾಂಧೀಜಿ ಹೇಳಿದ್ದಾರೆ. 'ಬೋಧಕ ಭಾಷೆಯಾದ ಇಂಗ್ಲೀಷು ನಮ್ಮ ಜನಾಂಗದ ಶಕ್ತಿಯನ್ನೇ ಹೀರಿ, ವಿದ್ಯಾರ್ಥಿಗಳ ಆಯಸ್ಸನ್ನೇ ಕಡಿಮೆ ಮಾಡಿದೆ, (English has sapped the energy of the nation and shortened the life of pupils. ಎಂಬ ಅವರಮಾತು ಈ ದಿನ ನಮಗೆ ಅನುಭವಕ್ಕೆ ಬಂದಿದೆ.

ಅಮರನಾಥ ಝಾ ಅವರು 'ಪರಭಾಷೆಯು ಬೋಧಕ ಭಾಷೆಯಾಗಿರುವುದು ಶಿಕ್ಷಣ ವಿಜ್ಞಾನ ದೃಷ್ಟಿಯಿಂದ ಸಂಪೂರ್ಣವಾಗಿ ಅನುಚಿತ ಮತ್ತು ಅದು ಸ್ವಂತ ಆಲೋಚನಾಶಕ್ತಿಯನ್ನು ಕುಗ್ಗಿಸಿ ಮನಸ್ಸಿಗೆ ಹೆಚ್ಚಿನ ಕ್ಲೇಶವನ್ನುಂಟುಮಾಡುತ್ತದೆ' (Educationally it is entirely unsound to use a foreign medium. It stifles original thinking and involves very severe mental strain.) ಎಂದಿದ್ದಾರೆ.

ಇಲ್ಲಿ ಒಂದು ಪ್ರಶ್ನೆ ಏಳುತ್ತದೆ. ನಮ್ಮ ಭಾಷೆಗೆ ಜೀವನದ ಹೊಸ ಪರಿಸ್ಥಿತಿಗಳೊಡನೆ ಹೊಂದಿಕೊಂಡು ಪ್ರಕಾಶಿಸುವ ಶಕ್ತಿಯಿದೆಯೇ? ಸಾವಿರಾರು ವರ್ಷಗಳಿಂದ ದಷ್ಟಪುಷ್ಟವಾಗಿ ಬೆಳೆದು ನಿಂತ ಕಲ್ಪವೃಕ್ಷ ನಮ್ಮ ನುಡಿ. ಹಿಂದೆಲ್ಲಾ ದೇಶದಲ್ಲಿ ಸಂಪೂರ್ಣ ವ್ಯವಹಾರ ಭಾಷೆಯಾಗಿ ರಂಜಿಸಿದೆ. ಅಲ್ಲಿದೆ ಇಂದಿನ ಹೊಸ ದೃಷ್ಟಿ, ಹೊಸ ವಿಚಾರಗಳಿಗೆ ತಕ್ಕಂತೆ ಒಗ್ಗಿದೆ. ಈ ತನಕ ಕನ್ನಡದಲ್ಲಿ ಪಾರಿಭಾಷಿಕ ಶಬ್ದಸಾಮಾಗ್ರಿ ಕಡಿಮೆ ಹಾಗೂ ಪಠ್ಯಪುಸ್ತಕಗಳ ಕೊರತೆ ಇದೆ ಎಂಬ ಮಾತು ಸ್ವಲ್ಪ ನಿಜವಿತ್ತು. ಇದಕ್ಕೆ ಕಾರಣ ವಿಜ್ಞಾನ, ಶಾಸ್ತ್ರ ಗ್ರಂಥಗಳನ್ನು ನಮ್ಮಲ್ಲಿ ಬರೆಯುವವರು ಇರಲಿಲ್ಲವೆಂದಲ್ಲ. ಬರೆದರೆ ಅಚ್ಚು ಮಾಡುವವರಾರು, ಕೊಂಡು ಓದುವವರಾರು; ಅಚ್ಚಿಸಿದರೆ ಅದಕ್ಕೆ ತಗುಲಿದ ವೆಚ್ಚವಾದರೂ ಹಿಂದಕ್ಕೆ ಬರುವುದೆಂಬ ಭರವಸೆಯಿದೆಯೆ? ಎಂಬ ಪರಿಸ್ಥಿತಿ ಇತ್ತು. ಅದಕ್ಕೆ ಅಂಥ ಪುಸ್ತಕಗಳ ಕೊರತೆಯಿತ್ತು. ಈಗ ಪರಿಸ್ಥಿತಿ ಬದಲಾಗಿದೆ. ನಾಡಿನ ನಾಲ್ಕು ವಿಶ್ವವಿದ್ಯಾಲಯಗಳು ಅನೇಕ ವಿಜ್ಞಾನ ಹಾಗೂ ಶಾಸ್ತ್ರ ಗ್ರಂಥಗಳನ್ನು ರಚಿಸಿ, ಅನುವಾದಿಸಿ ಪ್ರಕಟಿಸಿವೆ. ಇಂಥ ಗ್ರಂಥರಚನೆಗೆ ಸೂಕ್ತ ಪ್ರೋತ್ಸಾಹ ನೀಡಲು ಬಹುಮಾನ ಯೋಜನೆಯನ್ನೂ ಹಾಕಿಕೊಂಡಿವೆ. ಕನ್ನಡ ವಿಶ್ವಕೋಶ, ವಿವಿಧ ವಿಷಯ ವಸ್ತುಕೋಶ, ಮಕ್ಕಳ ವಿಶ್ವಕೋಶ, ಕನ್ನಡ ನಿಘಂಟು, ಕನ್ನಡ-ಇಂಗ್ಲೀಷು ನಿಘಂಟು ಮೊದಲಾದ ಅತ್ಯುಪಯುಕ್ತ ಆಧಾರ ಗ್ರಂಥಗಳು ತ್ವರಿತಗತಿಯಲ್ಲಿ ಸಿದ್ಧವಾಗುತ್ತಿವೆ.

ಪರಿಭಾಷೆಯ ವಿಷಯದಲ್ಲಿ ಕೆಲವು ಇಂಗ್ಲೀಷ್ ಪದಗಳಿಗೆ ಸಮಾನವಾದ ಪದಗಳು ಕನ್ನಡದಲ್ಲಿ ರೂಪುಗೊಂಡಿಲ್ಲ, ನಿಜ. ಸ್ವಲ್ಪಕಾಲ ಅದೇ ಪದಗಳನ್ನು ಬಳಸಿದರಾಯಿತು. ಈ ಸಮಸ್ಯೆ ಕನ್ನಡದವರಿಗೆ ಮಾತ್ರ ಮೀಸಲಾಗಿಲ್ಲ. ಭಾರತದ ಎಲ್ಲ ಭಾಷೆಗಳಲ್ಲೂ ಈ ತೊಂದರೆ ಇದ್ದೇ ಇದೆ. ಇಡೀ ಭಾರತಕ್ಕೆ ಒಂದು ಪರಿಭಾಷಾಕೋಶ ಸಿದ್ಧವಾದರೆ ಸಮಸ್ಯೆ ಪರಿಹಾರವಾಗಬಹುದು! ಈಗ ಕರ್ನಾಟಕದಲ್ಲಿ ಬಳಕೆಯಾಗುತ್ತಿರುವ ಶಾಸ್ತ್ರ ಪರಿಭಾಷೆಗಳಲ್ಲಿ ಏಕರೂಪವಿಲ್ಲ. ಮಂಗಳೂರಿನಲ್ಲಿ ಒಂದು ಬಗೆ, ಧಾರವಾಡದಲ್ಲಿ ಒಂದು ಬಗೆ, ಮೈಸೂರಿನಲ್ಲಿ ಮತ್ತೊಂದು ಬಗೆ, ಅನೇಕ ಸಂದರ್ಭಗಳಲ್ಲಿ ಮೂಲದ ಇಂಗ್ಲೀಷ್ ಪದ ಅರ್ಥವಾಗುತ್ತದೆ; ಕನ್ನಡದ ಅನುವಾದ ಶಬ್ದ ಅರ್ಥವಾಗುವುದಿಲ್ಲ. ಅಖಂಡ ಕರ್ನಾಟಕವನ್ನು ದೃಷ್ಟಿಯಲ್ಲಿಟ್ಟುಕೊಂಡು ಒಂದು ಪರಿಭಾಷಾಕೋಶ ಇಷ್ಟರಲ್ಲೇ ರಚನೆಯಾಗುತ್ತದೆ. ಹೀಗಾದರೆ ಇನ್ನೂ ಅನೇಕ ಶಾಸ್ತ್ರಗಳು ಬರುತ್ತವೆ. ಪಾಠ ಹೇಳಲು ಆರಂಭಿಸಿದರೆ ಪಠ್ಯಪುಸ್ತಕಗಳು ತಾನೇ ಬರುತ್ತವೆ. ಬೇಡಿಕೆ ಆರಂಭವಾದ ಮೇಲೆ ತಾನೆ ಸರಬರಾಜಿನ ಪ್ರಶ್ನೆ. 'ಬೆಳೆಯೇನೋ ಬೇಕಾದ ಹಾಗಿದೆ; ಕುಯಲುಗಾರರು ಕಡಿಮೆ' ಎಂಬ 'ಶ್ರೀ' ಅವರ ಮಾತು ನಿಜವಾಗಿದೆ.

ಕನ್ನಡಮೂಲಕವಾದ ಕಲಿಕೆ ಶಿಕ್ಷಣದ ಪ್ರಾಥಮಿಕ ಹಂತದಿಂದಲೇ ಆರಂಭವಾಗಬೇಕು. ಅಲ್ಲಿ ಕಾನ್ವೆಂಟ್ ವ್ಯಾಮೋಹಕ್ಕೆ ಬಲಿಯಾಗಿ ಮಕ್ಕಳಿಗೆ ಅರೆಮುರುಕು ಇಂಗ್ಲೀಷ್ ಕಲಿಸಿ. ನಂತರ ಕನ್ನಡ ಶಿಕ್ಷಣಕ್ಕೆ ಅಟ್ಟಿದರೆ ಎರಡೂ ದಕ್ಕದಂತಾಗುವುದು ಖಚಿತ. ಚಿಕ್ಕ ಮಕ್ಕಳ ಮನಸ್ಸು ಅಯಸ್ಕಾಂತದಂತಿರುತ್ತದೆ, ಅವರ ಮೆದುಳು ಬಹಳ ಚುರುಕಾಗಿರುತ್ತದೆ. ಆಗ ತಾಯ್ನುಡಿಯ ಸವಿಮಾತಿನಲ್ಲಿ ಬಿತ್ತಿದ ವಿದ್ಯೆ ಶಾಶ್ವತವಾಗಿ ನಿಲ್ಲುತ್ತದೆ. ಅನಂತರ ಪ್ರೌಢ ಶಿಕ್ಷಣದ ಹಂತದಲ್ಲಿ ಕುಡಿವರಿಯುತ್ತದೆ. ಉನ್ನತ ಶಿಕ್ಷಣಲ್ಲಿ ಪೂತು, ಕಾತು ಅವನ ಜೀವನದಲ್ಲಿ ಫಲಕಾರಿಯಾಗುತ್ತದೆ.

ಇಂದಿನ ವೈಜ್ಞಾನಿಕ ಯುಗದಲ್ಲಿ ಹಳೆಯ ಕಾಲದ ಮೌಲ್ಯಗಳೆಷ್ಟೋ ಬದಲಾಗುತ್ತಿವೆ. ಈ ಬದಲಾವಣೆಗಳನ್ನು ಶಿಕ್ಷಣ ತಜ್ಞರು ಗಮನಿಸಿ ಶಿಕ್ಷಣ ಪದ್ಧತಿಯನ್ನು ಕಾಲಕ್ಕೆ ಹೊಂದಿಕೊಳ್ಳುವಂತೆ ಮಾರ್ಪಡಿಸಬೇಕಾಗುತ್ತದೆ. ಶಾಲಾ ಕಾಲೇಜುಗಳು ಯುವಕರನ್ನು ಯಶಸ್ವೀ ನೌಕರರನ್ನಾಗಿ ಮಾಡುವ ಬರೀ ಕಾರ್ಖಾನೆಗಳಾಗಬಾರದು;

(ಮುಂದುವರಿಯುತ್ತದೆ)

21 ನೇ ಪುಟದಿಂದ

ಸುಂದರವಾದ ಮನೆಯನ್ನೇನೋ ಗಂಡ ಕಟ್ಟಿದ್ದ. ಆದರೆ ಆ ಮನೆಯಲ್ಲಿ ತೂಗುವ ತೊಟ್ಟಿಲು? ಅದರಲ್ಲಿ ಪವಡಿಸಿ ನಲಿಯುವ ಚಂದದ ಮಗು! ರಾಜಶೇಖರನನ್ನು ತನ್ನ ಪ್ರತಿರೂಪ ವೆಂಬಂತೆ ಭೂಮಿಗಿಳಿಸಿದ್ದಳು ಅಪರ್ಣಾ.

ಗಂಡನೆದುರು ಆ ಮಾತನ್ನೇ ಹೇಳಿದಾಗ ಶ್ರೀಧರ ನಿಜಕ್ಕೂ ಹೌದೆಂದು ತಲೆದೂಗಿದ್ದ.

ಇಂದು ಸಂಕ್ರಾಂತಿಯು, ಎಳ್ಳು, ಬೆಲ್ಲಗಳ ಕೊಡಿಗೆಯನ್ನು ಹಂಚಲು ಅಪರ್ಣಾ ಹೊರಟಿದ್ದಾಳೆ, ಲಲಿತೆಯ ಮನೆಗೆ, ಎಳೆಗಂದ ರಾಜಶೇಖರನೊಂದಿಗೆ, ಗಂಡ ಶ್ರೀಧರನೊಂದಿಗೆ. ಆಕೆಯು ಮನದಾಳದಲ್ಲಿ ಸಿದ್ಧಗಂಗೆಯ ಆನಂದದ ಕಲಕಲ ರವ ಮೊಳಗುತ್ತಿದೆ. —

ಹಿಂದಿನ ಸಂಚಿಕೆಯಿಂದ

## 'ಧ್ಯಾನ ಕುಸುಮಾಂಜಲಿ'

ಗಳ ಪ್ರಕಾರ ಎಷ್ಟು ಕಾಲವಿರ ಬೇಕಾಗಿತೋ, ಅಷ್ಟು ಕಾಲ ಇಲ್ಲಿ ಇದ್ದಿರುವೆ- ಈ ವಿಚಾರದಲ್ಲಿ ಸಂಶಯ ಬೇಡ ಸಮಾಧಾನಿಯಾಗಿರು. ನಿನ್ನನ್ನು ಈ ಲೋಕಕ್ಕೆ ತಂದ ಪ್ರಕೃತಿ ಮಾತೆಯೆ ಈಗ ನಿನ್ನನ್ನು ಈ ಲೋಕದಿಂದ ಹೊರಕ್ಕೆ ಕಳುಹಿಸಿದರೆ ಆದಕ್ಕೆ ನೀನೇಕೆ ವ್ಯಸನಪಡಬೇಕು ?ನಾಟಕದ ಯಜಮಾನನು ನಾಟ್ಯಗಾರನೊಬ್ಬನನ್ನು ಸ್ವಲ್ಪ ಹೊತ್ತು ಅಭಿನಯಿಸಲು ಅವಕಾಶ ಕೊಟ್ಟು ಅನಂತರ ಅವನನ್ನು ಕಳುಹಿಸಿಕೊಟ್ಟಹಾಗೆ! ಹೌದು, ನಾಟಕ ಇನ್ನೂ ಮುಗಿದಿಲ್ಲವಲ್ಲಾ, ಎನ್ನುವೆಯೋ ? ಯಥಾರ್ಥವನ್ನೇ ನುಡಿದಿರುವೆ, ಈ ಬಾಳುವೆಯ ವಿಚಾರದಲ್ಲಿ ಮೂರಂಕಗಳಾದರೆ ಪೂರ್ತಿನಾಟಕವಾಯಿ ತೆಂದೇಲೆಕ್ಕ! ಇನ್ನು ಅದರಲ್ಲಿ ಪ್ರತಿಯೊಬ್ಬನೂ ಎಷ್ಟು ಕಾಲ ಮಾತ್ರ ಪಾತ್ರವಹಿಸ ಬೇಕೆನ್ನುವುದು ನಿನ್ನ ಜನನಕ್ಕೆ ಕಾರಣನಾದ ಹಾಗೆಯೇ ನಿನ್ನಮರಣಕ್ಕೆ, ಕಾರಣನಾಗಿರುವ ಆ ವಿಶ್ವ ನಾಟಕ ಸೂತ್ರಧಾರಿಯೇ ನಿರ್ಧರಿಸ ಬೇಕಾದ ವಿಷಯ. ನಿನಗೋ ಅದು ಸಂಬಂಧಪಟ್ಟುದಲ್ಲ, ಇದೂ ಸಂಬಂಧಪಟ್ಟುದಲ್ಲ. ನಿನ್ನಷ್ಟಕ್ಕೆ ನೀನು ಸಂತುಷ್ಟನಾಗಿ ತೃಪ್ತನಾಗಿ ಹೋಗು- ನಿನ್ನನ್ನು ಸಾಗ ಕಳುಹಿಸುತ್ತಿರುವ ಆ ಪ್ರಭುವೂ ಹರ್ಷ ಚಿತ್ತನಾಗಿಯೇ ಇದ್ದಾನೆ,

ನಿನ್ನದಾವುದು ?

ಎಲ್ಲ ವಿಧವಾದ ಅಭಿಮತವನ್ನು ಹೊರಕ್ಕೆ ತಳ್ಳು, ನೀನು ಕ್ಷೇಮವಾಗಿರುವೆ. ಅದನ್ನು ಹೊರಗೆ ತಳ್ಳಲು ಅಭ್ಯಂತರವೇನು! ಯಾವ ವಿಷಯವಾದರೂ ನೀನು ದುಃಖ ಪಡುತ್ತಿರುವಾಗ, ಸಕಲವೂ ಪ್ರಕೃತಿಯ ಸಹಜ ಧರ್ಮಕ್ಕನುಸಾರವಾಗಿ ನಡೆಯುವುದೆಂಬುದನ್ನೂ, ಅಸಹಜ ಧರ್ಮವನ್ನು ನಿರಾಕರಿಸುವವನಿಗೆ ಚಿಂತೆ ಎಂಬುದನ್ನೂ ಮರೆತೆಯಾ ? ಹಾಗೆ ಯಾರು ಎಂದೂ ಕಂಡು ಹೇಳಿದ್ದು ನಿನಗಾಗಿರುವುದು ತಾನೆ ಏನು ? ಪ್ರಪಂಚದಲ್ಲಿ ಅನಾದಿಯಿಂದ ನಡೆದು ಬಂದದ್ದೇ ನಡೆದಿರುವುದು ಮುಂದೆಯೂ ಸದಾ ನಡೆಯತಕ್ಕದ್ದು, ಈಗಲೂ ಎಲ್ಲಾ ಕಡೆಯಲ್ಲಿಯೂ ನಡೆಯುತ್ತಿರುವುದು. ಮಾನವರೆಲ್ಲಾ ಹೇಗೆ ಸಮೀಪ ಬಂಧುಗಳಾಗಿದ್ದಾರೆ ? ರಕ್ತ ಬೀಜ ಸಂಬಂಧದಿಂದಲ್ಲ. ಚಿತ್ತ ಬುದ್ಧಿ, ಜ್ಞಾನ ಸಂಬಂಧದಿಂದ ಎಂಬುದನ್ನು ಮರೆತು ಬಿಟ್ಟೆಯಾ ? ಅಲ್ಲದೆ ಪ್ರತಿಯೊಬ್ಬನ ಚಿತ್ತವೂ ದೈವವೆಂಬ ಮೂಲ ಸ್ಥಾನದಿಂದ ಹೊರಟು ದೈವಿಕಾಂಶವುಳ್ಳದ್ದು. ಯಾರೂ ಯಾವುದನ್ನೂ- ತನ್ನ ಮಕ್ಕಳನ್ನಾಗಲೀ, ಶರೀರವನ್ನಾಗಲೀ, ಕಡೆಗೆ ತನ್ನ ಪ್ರಾಣವನ್ನೇ ಆಗಲಿ ತನ್ನದೆಂದು ಹೇಳಿಕೊಳ್ಳುವ ಹಾಗಿಲ್ಲ, ಏಕೆಂದರೆ ಇವೆಲ್ಲವು ಸಕಲವರದನಾದ ಆ ಏಕ ಮಾತ್ರ ಈಶ್ವರನ ಕೃಪೆಯಿಂದಲೇ ಬರತಕ್ಕವು. ನಾವೀಗ ಬೆಲೆ ಕಟ್ಟುವ ಕೀರ್ತಿ, ಗೌರವ, ಪೂಜ್ಯಸ್ಥಾನ ಮುಂತಾದುವೆಲ್ಲಾ ಕೇವಲ ಅಭಿಮತ ಜನ್ಯವಾದವು, ಯಾರನ್ನೂ ತಾನೀಗ ಅನುಭವಿಸುತ್ತಿರುವ ವರ್ತಮಾನವೆಂಬ ಒಂದು ಒಂದು ಕ್ಷಣವನ್ನು ಬಿಟ್ಟರೆ ಉಳಿದ ಕಾಲದಲ್ಲಿ ನ್ಯಾಯವಾಗಿ ಬದುಕಿರುವುದಿಲ್ಲ. ಆದ ಕಾರಣ ಯಾವನು ಸತ್ತರೂ ಒಂದು ಕ್ಷಣ ಕಾಲಕಿಂತ ಹೆಚ್ಚಾಗಿ ಹೋಗಲಾಡಿಸಿಕೊಳ್ಳುವ ಹಾಗಿಲ್ಲ:- ಈ ಅಂಶಗಳನ್ನೆಲ್ಲಾ ನೀನು ಮರತೇ ಇರಬೇಕು.

ಆರೀಲಿಯುಸ್ಸಿನ ಧ್ಯಾನ ಮಂಜರಿಯಲ್ಲಿ ಇಂತಹ ಆದೆಷ್ಟೊ? ಧ್ಯಾನ ಕುಸುಮಗಳರಳಿ ಪರಿಮಳ ಬೀರುತ್ತಿವೆ. ಒಂದೊಂದೂ ಪ್ರತ್ಯೇಕ ಪುಷ್ಪವಿದ್ದಂತೆ ಒಂದರ ಸೊಬಗು ಸುವಾಸನೆ ಮತ್ತೊಂದಕ್ಕಿಲ್ಲವಾದರೂ, ಆಧ್ಯಾತ್ಮಿಕ ಕಂಪ ಬೀರುವಲ್ಲಿ ಒಂದು ಮತ್ತೊಂದಕ್ಕಿಂತ ಮಾತ್ರ ಯಾವ ವಿಧದಲ್ಲೂ ಕಡಿಮೆ ಇಲ್ಲ. ಎಲ್ಲಾ ಕಾಲದ ಸಂತರೂ, ಮುಮುಕ್ಷುಗಳೂ ಈ ಧ್ಯಾನ ಕುಸುಮಗಳ ಆಳದಲ್ಲಿ ಅಡಗಿರುವ ಸತ್ಯದ ಸವಿಯನ್ನು ಸವಿದು ಆನಂದಿಸುತಿರುವರು.

—



## ಸಿದ್ಧಗಂಗಾ ಶ್ರೀ ಗ್ರಂಥ ಪ್ರಕಟನೆ.

ಶ್ರೀ ಸಿದ್ಧಗಂಗೆಯ ಪುಣ್ಯಜ್ಯೋತಿ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು ಸಕಲ ಜೀವಾವಳಿಗೆ ಲೇಸನ್ನುಂಟುಮಾಡುತ್ತಿರುವ ಮಹಾತಪಸ್ವಿಗಳು. ಪೂಜ್ಯರು ಮೇರು ಸದೃಶ ದಿವ್ಯ ವ್ಯಕ್ತಿತ್ವ. ಅವರು ನಡೆಸುತ್ತಿರುವ ವ್ಯಾಪಕವಾದ, ವೈವಿಧ್ಯಪೂರ್ಣವಾದ ಲೋಕೋಪಕಾರಕ ಕಾರ್ಯಗಳು 'ದೇಶವಿದೇಶಗಳ ಗಮನ ಸೆಳೆದಿವೆ ; ಆಧುನಿಕ ಯುಗದ ಪವಾಡವೆನಿಸಿವೆ. ಅವರ ವಿಶ್ವವಿಶಾಲವಾದ ಹೃದಯಶ್ರೀಯ ಕೃಪಾಶ್ರಯದಲ್ಲಿ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡವರು ಎಲ್ಲ ಕೋಮಿನ ಲಕ್ಷೋಪಲಕ್ಷಮಂದಿ. ಸಂನ್ಯಾಸಿಗಳಾದರೂ ನವ ಭಾರತ ನಿರ್ಮಾಣ ಕಾರ್ಯದಲ್ಲಿ ಅವರುಗೈದ ಶೈಕ್ಷಣಿಕ, ಸಾಮಾಜಿಕ, ಸಾಂಸ್ಕೃತಿಕ, ವೈಜ್ಞಾನಿಕ ಹಾಗೂ ವೈಚಾರಿಕವಾದ ರಚನಾತ್ಮಕ ಕಾರ್ಯಗಳು ನಾಡ ನುಡಿಯ ಕಟ್ಟುವವರಿಗೆ ಆದರ್ಶವೆನಿಸಿವೆ. ವಿದ್ಯಾರ್ಥಿಗಳಿಗೆ ಅವರು ನಿಜವಾದ ಅರ್ಥದಲ್ಲಿ ಗುರು. ದೀನ ದಲಿತರಿಗೆ ಕರುಣಾಮಯಿ, ಕಲಾವಿದರಿಗೆ ಸ್ಫೂರ್ತಿಯ ನೆಲೆ, ಮುಮುಕ್ಷುಗಳಿಗೆ ಧರ್ಮದ ಸೆಲೆ. 1930ರಲ್ಲಿ ಶ್ರೀಮಠದ ಅಧಿಕಾರ ಸ್ವೀಕರಿಸಿದ ಪೂಜ್ಯರು ಸರ್ವ ಸಮಾಜಗಳ ಸರ್ವಾಂಗೀಣ ಪ್ರಗತಿಗೆ ಅಹರ್ನಿಶಿ ದುಡಿಯುತ್ತಾ ಬಂದಿದ್ದಾರೆ. 1980ರಲ್ಲಿ ಅವರು ಶ್ರೀ ಮಠಾಧ್ಯಕ್ಷರಾಗಿ ಅಧಿಕಾರ ಸ್ವೀಕರಿಸಿದ50ವರ್ಷಗಳ ಮಹತ್ವಪೂರ್ಣಬದುಕಿನ ಚಿನ್ನದ ಹಬ್ಬವನ್ನು ಆಚರಿಸಲು ಈಗಾಗಲೇ ಸಿದ್ಧತೆಗಳು ನಡೆಯುತ್ತಿವೆ. ಈ ಶುಭಸಮಯದಲ್ಲಿ ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿಸಂಘವು ಪೂಜ್ಯರಿಗೆ ಒಂದು ರಾಷ್ಟ್ರಮಟ್ಟದ ಸಂಭಾವನಾಗ್ರಂಥವನ್ನು ಸಮರ್ಪಿಸಬೇಕೆಂದು ನಿರ್ಧರಿಸಿ, ಈಬಗೆಗೆ ಕಾರ್ಯೋನ್ಮುಖವಾಗಲು ಸಂಭಾವನಾಗ್ರಂಥ ಪ್ರಕಟಣಾ ಸಮಿತಿಯೊಂದನ್ನು ರಚಿಸಿದೆ.

ಸಂಭಾವನಾ ಗ್ರಂಥ 'ಸಿದ್ಧಗಂಗಾಶ್ರೀ' ಡೆಮ್ಮಿ 1/4 ಆಕಾರದಲ್ಲಿ 1000 ಪುಟಗಳನ್ನೊಳಗೊಂಡಿರುತ್ತದೆ. ಇದರಲ್ಲಿ 'ಕ್ಷೇತ್ರ ಶ್ರೀ' 'ದರ್ಶನ ಶ್ರೀ' ಹಾಗೂ 'ಸಾಹಿತ್ಯ ಶ್ರೀ' ಎಂಬ ಮೂರು ಭಾಗಗಳು ಇರುತ್ತವೆ. ಮೊದಲನೆಯಭಾಗದಲ್ಲಿ ಶ್ರೀ ಕ್ಷೇತ್ರದ ಹಾಗೂ ಪೂಜ್ಯರ ಬಗೆಗಿನ ಲೇಖನಗಳು ಇರುತ್ತವೆ. ಎರಡನೆಯ ಭಾಗದಲ್ಲಿ ಭಾರತೀಯ ದರ್ಶನಗಳ ಪರಿಚಯಾತ್ಮಕ ಲೇಖನಗಳು, ವೀರಶೈವ ಧರ್ಮದ ಇತಿಹಾಸ, ತಾತ್ವಿಕ ವಿವೇಚನೆಯ ಲೇಖನಗಳು ಇರುತ್ತವೆ. ಮೂರನೆಯ ಭಾಗದಲ್ಲಿ ವೀರಶೈವ ಸಾಹಿತ್ಯದ ಇತಿಹಾಸ, ವಿವಿಧ ಪ್ರಾಕಾರಗಳ ಪರಿಚಯ, ಇತರ ಸಾಹಿತ್ಯಗಳ ಮೇಲೆ ಅವುಗಳ ಪ್ರಭಾವ ಮುಂತಾದ ಲೇಖನಗಳು ಸೇರ್ಪಡೆಯಾಗುತ್ತವೆ. ಕೊನೆಯಲ್ಲಿ ನಾಡಿನ ಕವಿಗಳುಕ್ಷೇತ್ರದ ಹಾಗೂ ಪೂಜ್ಯರ ಬಗ್ಗೆ ರಚಿಸಿದ ಕವನಗಳ ಸಂಕಲನವಿರುತ್ತದೆ.

ಈ ಗ್ರಂಥ ಬೃಹತ್ತು ಹಾಗೂ ಮಹತ್ತುಗಳೆರಡರಲ್ಲೂ ಮಿಗಿಲೆನಿಸಿ ಕವಿಗಳ, ದಾರ್ಶನಿಕರ, ಅನುಭವಿಗಳ, ಮುತ್ಸದ್ದಿಗಳ ಅನುಭವ, ಅನಿಸಿಕೆಗಳಿಂದ ಪರಿಪಾಕಗೊಂಡು ಒಂದು ಸಂದರ್ಭ ಗ್ರಂಥವಾಗಬೇಕೆಂಬ ಹಂಬಲ ನಮ್ಮದು.

ಈಗಾಗಲೇ ರಾಷ್ಟ್ರದ ಒಳಹೊರಗಿರುವ ಅನೇಕ ವಿದ್ವಾಂಸರ, ಅನುಭಾವಿಗಳ, ವಿಮರ್ಶಕರ, ಕವಿಗಳ ಲೇಖನ ಹಾಗೂ ಕವನಗಳಿಗಾಗಿ ವಿಜ್ಞಾಪಿಸಿಕೊಳ್ಳಲಾಗಿದೆ. ಈ ಗ್ರಂಥ ಪ್ರಕಟನಾ ಸಮಿತಿಯ ಅಧ್ಯಕ್ಷತೆಯನ್ನು ನಾಡಿನ ಖ್ಯಾತ ಸಾಹಿತಿ. ಡಾ. ಸಿದ್ಧಯ್ಯ ಪುರಾಣಿಕರವರೂ ಸಂಪಾದಕತ್ವವನ್ನು ಚನ್ನಪ್ಪ ಎರೇಸೀಮೆ ಮತ್ತು ಟಿ. ಆರ್. ಮಹಾದೇವಯ್ಯ ಅವರೂ ವಹಿಸಿದ್ದಾರೆ. ಮತ್ತು ದರ್ಶನ ಭಾಗ್ಯದಿಂದ ಪುನೀತರಾದವರು ಶ್ರೀ ಗಳಬಗ್ಗೆ ಶ್ರೀ ಕ್ಷೇತ್ರದ ಐತಿಹಾಸಿಕ ಪರಂಪರೆಯ ಬಗ್ಗೆ ತಮಗೆ ತಿಳಿದ ವಿಷಯಗಳನ್ನು ಸಮಿತಿಯ ಅವಗಾಹನೆಗೆ ತಿಳಿಸಿ ಸಹಕರಿಸಬೇಕೆಂದು ಪ್ರಾರ್ಥನೆ.

ಇತಿ ಸಿದ್ಧಗಂಗಾ ಶ್ರೀ<br>ಗ್ರಂಥ ಪ್ರಕಟಣಾ ಸಮಿತಿ. ಶ್ರೀ ಸಿದ್ಧ ಗಂಗಾ.

"SIDDAGANGA" Monthly, Sree Siddaganga Mutt. KRN Q-9
Registered with the Registrar of News papers for India under No. 17139/69


# ಕಸ್ತೂರಿ

## ಬಾರ್ ಸೋಪ್
## ನೀಲಂ ಸೋಪ್



### ಸ್ವಚ್ಛತೆ ಮತ್ತು ಪ್ರಕಾಶಮಾನವಾದ ಬಟ್ಟೆಗಳಿಗೆ







ತಯಾರಕರು:
ಶ್ರೀ ರಾಮಕೃಷ್ಣ ಆಯಿಲ್ ಮಿಲ್ಸ್. ಮಂಗಳೂರು-575 003

mas SROM 142





ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.